# ದಾಟು ಕಾದಂಬರಿ : ಒಂದು ವಿಶ್ಲೇಷಣೆ

ಕನ್ನಡ ವಿಶ್ವವಿದ್ಯಾಲಯ, ಹಂಪಿ, ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ನಿಬಂಧ


ಸಂಶೋಧಕರು

ನಾಗರಾಜು ಕೆ. ಆರ್

ನೊಂದಣಿ ಸಂಖ್ಯೆ : ಕೆ.ಯು.ಕೆ.ಎಸ್/೦೦೫೧೦

ಮಾರ್ಗದರ್ಶಕರು

ಡಾ. ಬಿ.ಎಂ. ಪುಟ್ಟಯ್ಯ

ಮುಖ್ಯಸ್ಥರು ಮತ್ತು ಸಹ ಪ್ರಾಧ್ಯಾಪಕರು







ಭಾಷಾ ನಿಕಾಯ

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ –೫೮೩ ೨೭೬

೨೦೧೩

# ದಾಟು ಕಾದಂಬರಿ : ಒಂದು ವಿಶ್ಲೇಷಣೆ

ಕನ್ನಡ ವಿಶ್ವವಿದ್ಯಾಲಯ, ಹಂಪಿ, ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ನಿಬಂಧ

ಸಂಶೋಧಕರು

ನಾಗರಾಜು ಕೆ. ಆರ್.

ಮಾರ್ಗದರ್ಶಕರು

ಡಾ. ಬಿ.ಎಂ. ಪುಟ್ಟಯ್ಯ

ಮುಖ್ಯಸ್ಥರು ಮತ್ತು ಸಹ ಪ್ರಾಧ್ಯಾಪಕರು



ಭಾಷಾ ನಿಕಾಯ

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ –೫೮೩ ೨೭೬

೨೦೧೩

# ಮಾರ್ಗದರ್ಶಕರ ಪ್ರಮಾಣ ಪತ್ರ

**ನಾಗರಾಜು ಕೆ. ಆರ್**. ಇವರು **"ದಾಟು ಕಾದಂಬರಿ : ಒಂದು ವಿಶ್ಲೇಷಣೆ"** ಎಂಬ ಶೀರ್ಷಿಕೆಯ ಈ ಎಂ.ಫಿಲ್. ನಿಬಂಧವನ್ನು, ನನ್ನ ಮಾರ್ಗದರ್ಶನದಲ್ಲಿ ಸ್ವತಂತ್ರ ಅಧ್ಯಯನದ ಮೂಲಕ ಸಿದ್ದಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯ, ಹಂಪಿ, ಕನ್ನಡ ಸಾಹಿತ್ಯ ಅಧ್ಯಯನದ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ, ಪ್ರಸ್ತುತ ನಿಬಂಧವನ್ನು ಈ ಮೊದಲು ಬೇರೆ ಯಾವುದೇ ವಿಶ್ವವಿದ್ಯಾಲಯದ, ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣಿಕರಿಸಿರುತ್ತೇನೆ.

ದಿನಾಂಕ: ೩೦-೦೭-೨೦೧೩

ಸ್ಥಳ: ವಿದ್ಯಾರಣ್ಯ

ಮಾರ್ಗದರ್ಶಕರು

(ಡಾ. ಬಿ.ಎಂ. ಪುಟ್ಟಯ್ಯ)

ಮುಖ್ಯಸ್ಥರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ - ೫೮೩ ೨೭೬.

ಮುಖ್ಯಸ್ಥರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ - ೫೮೩ ೨೭೬.

# ದೃಢೀಕರಣ ಪತ್ರ

**"ದಾಟು ಕಾದಂಬರಿ: ಒಂದು ವಿಶ್ಲೇಷಣೆ"** ಎಂಬ ಶೀರ್ಷಿಕೆಯ ಈ ಎಂ.ಫಿಲ್. ನಿಬಂಧವನ್ನು ಸ್ವತಂತ್ರ ಅಧ್ಯಯನದ ಮೂಲಕ **ಡಾ. ಬಿ.ಎಂ. ಪುಟ್ಟಯ್ಯ** ಅವರ ಮಾರ್ಗದರ್ಶನದಲ್ಲಿ ಸಿದ್ದಪಡಿಸಿದ್ದೇನೆ. ಕನ್ನಡ ವಿಶ್ವವಿದ್ಯಾಲಯ, ಹಂಪಿ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ನಿಬಂಧವನ್ನು ಈ ಮೊದಲು ಬೇರೆ ಯಾವುದೇ ವಿಶ್ವವಿದ್ಯಾಲಯದಲ್ಲಿ ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ನಾಗರಾಜು. ಕೆ. ಆರ್.

ದಿನಾಂಕ: ೩೦-೦೭-೨೦೧೩

ಸ್ಥಳ: ವಿದ್ಯಾರಣ್ಯ

**ಎಂ.ಫಿಲ್. ಸಂಶೋಧನಾ ವಿದ್ಯಾರ್ಥಿ**

(ನಾಗರಾಜು ಕೆ. ಆರ್.)

# ದಾಟು ಕಾದಂಬರಿ: ಒಂದು ವಿಶ್ಲೇಷಣೆ

## ಪರಿವಿಡಿ

ಅಧ್ಯಾಯ ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಮಹತ್ವ

## ಪ್ರಸ್ತಾವನೆ

ಕನ್ನಡ ಸಾಹಿತ್ಯಕ್ಕೆ ಬಹು ಪ್ರಾಚೀನವೂ, ಸಮೃದ್ಧವೂ ಆದ ಇತಿಹಾಸವಿದೆ. ಸಾಹಿತ್ಯವು ಚಲನಶೀಲತೆವುಳ್ಳದು. ಸಾಹಿತ್ಯವು ಯಾವುದೆ ನಾಡಿನ ರಾಜಕೀಯ, ಧಾರ್ಮಿಕ, ಸಾಮಾಜಿಕ, ಜನಜೀವನದ ನಿರೂಪಣೆಯಾಗಿದ್ದು, ಅಂದಂದಿನ ಯುಗ ಧರ್ಮ ಮತ್ತು ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತದೆ. ಸಾಹಿತ್ಯವು ನಿರಂತರವಾಗಿ ಹೊಸ ಹೊಸ ಹೊಳಹುಗಳನ್ನು ಹುಟ್ಟುಹಾಕುತ್ತದೆ. ಮಹಾಕಾವ್ಯ, ಕಾವ್ಯ, ನಾಟಕ ಪ್ರಯೋಗಶೀಲತೆಯಲ್ಲಿ ಕಾದಂಬರಿ ಪ್ರಕಾರವು ಉಗಮಿಸಿತು. ಆಧುನಿಕ ಕಾವ್ಯಕ್ಕೆ ಇಂಗ್ಲಿಶ್ ಕಾವ್ಯದ ಪ್ರಭಾವ ಆದಂತೆಯೇ ಕಾದಂಬರಿ ಪ್ರಕಾರಕ್ಕೂ ಸಹ ಇಂಗ್ಲಿಶ್ ಸಾಹಿತ್ಯವೇ ಪ್ರಭಾವ ಬೀರಿತು. ಕನ್ನಡ ಸಾಹಿತ್ಯ ಸಂದರ್ಭದಲ್ಲಿಯೂ ಸಹ ಕನ್ನಡ ಕಾದಂಬರಿಯ ಉಗಮವನ್ನು ೧೯ನೆಯ ಶತಮಾನದ ಕೊನೆಯ ದಶಕದಿಂದ ಗುರ್ತಿಸಬಹುದು. ಗುಲ್ವಾಡಿ ವೆಂಕಟರಾಯರ 'ಇಂದಿರಾ ಬಾಯಿ' (೧೮೯೯) ನಮ್ಮ ಮೊಟ್ಟ ಮೊದಲನೆಯ ಸ್ವತಂತ್ರ ಕಾದಂಬರಿ. ಇದು ಇಂಗ್ಲಿಶ್ ಕಾದಂಬರಿಗಳ ಪ್ರಭಾವಕ್ಕಿಂತ ಮೊದಲು ಬಂದಿತು. ಭಾಷಾಂತರಗಳು, ರೂಪಾಂತರಗಳು ಇವೆಲ್ಲ ಕಥೆಗಳಾಗಿವೆ. ೧೮೭೫ರಿಂದ ೧೯೩೦ ರವರೆಗಿನ ಕಾಲವನ್ನು ಕನ್ನಡ ಕಾದಂಬರಿಯ ಉದಯದ ಕಾಲವೆಂದು ಕರೆಯಲಾಗಿದೆ.

ಕಾದಂಬರಿ ಸಾಹಿತ್ಯ ಪ್ರಕಾರವು ಒಂದು ರೀತಿಯಿಂದ ಜಾನಪದ ಸಾಹಿತ್ಯದಂತೆ ಕಾಣುತ್ತದೆ. ಸಾಮಾನ್ಯ ಜನರ ಆಶೋತ್ತರಗಳನ್ನು, ಅಭಿರುಚಿಗಳನ್ನು, ಹಿತಾಸಕ್ತಿಗಳನ್ನು, ಕನಸುಗಳನ್ನು ಸಂಸ್ಕೃತಿಯ ವಿವಿಧ ಆಯಾಮಗಳನ್ನು ವಿವರವಾಗಿ, ಅತ್ಯಂತ ಸೂಕ್ಷ್ಮವಾಗಿ ಅದು ಚಿತ್ರಿಸುತ್ತದೆ. ಆದ್ದರಿಂದಲೇ ಉಳಿದ

ಸಾಹಿತ್ಯ ಪ್ರಕಾರಗಳಿಗಿರುವ ರೂಪಲಕ್ಷಣಗಳು, ನಿಯಮ ನಿರ್ಬಂಧಗಳು ಇದಕ್ಕೆ ವಿಶಿಷ್ಟವಾಗಿರುವುದಿಲ್ಲ. ಇದು ಪರಿಪೂರ್ಣತೆಯನ್ನು ಮುಟ್ಟಿದ ರೂಪವಾಗಿರದೆ, ಇನ್ನೂ ಬೆಳವಣಿಗೆಯನ್ನು ಪಡೆಯುತ್ತಲಿದೆ. ಇನ್ನೊಂದು ರೀತಿಯಿಂದ ನೋಡಿದಾಗ ಇದು ಒಬ್ಬ ಲೇಖಕನದೇ ಕೃತಿಯಾಗಿರುವುದರಿಂದ, ಶೈಲಿ ಹಾಗೂ ಆವಿಷ್ಕಾರಗಳ ವೈಶಿಷ್ಟ್ಯವನ್ನೂ ಪಡೆದುಕೊಂಡಿದೆ. ಮಹಾ ಕಾವ್ಯವು ಒಂದು ಕಾಲಕ್ಕೆ ತನ್ನ ಉದ್ದೇಶವನ್ನು ಸಾಧಿಸಿ, ಐತಿಹಾಸಿಕವಾಗಿ ಮಾತ್ರ ಬದುಕಿರುವ ಸಾಹಿತ್ಯ ಪ್ರಕಾರವಾದರೆ, ಕಾದಂಬರಿ ಸಮಕಾಲೀನ ಜೀವನಕ್ಕೆ ತೀರ ಯೋಗ್ಯವಾದ ರೂಪವಾಗಿದೆ. ಒಂದು ಸಾಹಿತ್ಯ ಲೋಕದ ಆ ತುದಿ ಮಹಾ ಕಾವ್ಯವಾದರೆ, ಇನ್ನೊಂದು ಈ ತುದಿಯು ಕಾದಂಬರಿಯಾಗಿದೆ.

ಮುದ್ದಣನ (ಲಕ್ಷ್ಮೀನಾರಾಯಣಪ್ಪ) ಗೋದಾವರಿ ಎಂಬ ಕಾದಂಬರಿಯನ್ನು ಅರ್ಧ ಮುಗಿಸಿದ್ದಾಗಿ ತಿಳಿದುಬಂದಿದೆ. ಕೆಂಪು ನಾರಾಯಣನ ಮುದ್ರಾಮಂಜೂಷದಲ್ಲಿಯ ಕಥನ ರೀತಿ ಕಾದಂಬರಿಗೆ ಹೆಚ್ಚು ಸಮೀಪವಾಗಿದೆ ಎನ್ನಬಹುದು. ಸಾಮಾಜಿಕ ಕಾದಂಬರಿಗಳಾದ, ಬೋಳಾರ ಬಾಬುರಾಯರ 'ವಾಗ್ದೇವಿ' ಎಂ.ಎಸ್. ಪುಟ್ಟಣ್ಣನವರ 'ಮಾಡಿದ್ದುಣ್ಣೋ ಮಹಾರಾಯ' ಹಾಗೂ ಕೆರೂರು ವಾಸುದೇವಾಚಾರ್ಯರ 'ಇಂದಿರೆ' ಈ ಕಾದಂಬರಿಗಳು ಮುಖ್ಯವಾಗಿವೆ.

ಆಧುನಿಕ ಸಾಹಿತ್ಯದಲ್ಲಿ ಕಾದಂಬರಿಯು ಅತ್ಯಂತ ಲೋಕಪ್ರಿಯವಾದ, ಜನಪ್ರಿಯವಾದ, ಪ್ರಸಿದ್ಧವಾದ ಸಾಹಿತ್ಯ ಪ್ರಕಾರವಾಗಿ ಬೆಳೆದುಬಂದಿದೆ. ಈ ಕಾದಂಬರಿ ಸಾಹಿತ್ಯವು ಜನಸಾಮಾನ್ಯರ ಬದುಕನ್ನು ಪ್ರತಿಬಿಂಬಿಸಲು ಹುಟ್ಟಿಕೊಂಡಿದೆ. ಕಾದಂಬರಿ ಕನ್ನಡ ಸಾಹಿತ್ಯಕ್ಕೆ ಬಂದದ್ದು ಮುಖ್ಯವಾಗಿ ಬಂಗಾಲಿ ಮತ್ತು ಮರಾಠಿಗಳ ಮೂಲಕ. ಇವು ಅನುವಾದಿತ ಇಲ್ಲವೇ ಐತಿಹಾಸಿಕ ಕೃತಿಗಳು ಇದರ ಜೊತೆಗೆ ಸಾಮಾಜಿಕ ವಸ್ತುಗಳನ್ನು ಆರಿಸಿಕೊಂಡು ಕಾದಂಬರಿಗಳನ್ನು ಬರೆಯುವ ಪ್ರಯತ್ನವನ್ನು ನಡೆಸಿದ್ದರು. ಕನ್ನಡದಲ್ಲಿ ಬ್ರಿಟಿಷ್ ವಸಾಹತು ಆಡಳಿತ ಕಾಲದಲ್ಲಿ ಆಧುನಿಕ ಶಿಕ್ಷಣವನ್ನು ಪಡೆದ ಸಾಹಿತಿಗಳು ಪಶ್ಚಿಮ ದೇಶಗಳ ಸಾಹಿತ್ಯವನ್ನು ಅಧ್ಯಯನ ಮಾಡಿದರ ಫಲವಾಗಿ ಕನ್ನಡದಲ್ಲಿ ಕಾದಂಬರಿಗಳು ಸೃಷ್ಟಿಯಾಗತೊಡಗಿದವು. ಅವುಗಳು ಯಾವುವೆಂದರೆ ಕುವೆಂಪು ಅವರ 'ಕಾನೂರು ಹೆಗ್ಗಡತಿ', ಮಾಸ್ತಿಯವರ 'ಚಿಕ್ಕವೀರರಾಜೇಂದ್ರ', ಶಿವರಾಮ ಕಾರಂತರ 'ಚೋಮನದುಡಿ', ಅ.ನ.ಕೃ. ಅವರ 'ಸಂಧ್ಯಾರಾಗ', ತ.ರಾ.ಸು. ಅವರ 'ಮಸಣದ ಹೂವು', ಕುಂ. ವೀರಭದ್ರಪ್ಪನವರ 'ಅರಮನೆ', ಮತ್ತು ದೇವನೂರು ಮಹಾದೇವರ 'ಒಡಲಾಳ' ಇನ್ನು ಮುಂತಾದ ಕಾದಂಬರಿಗಳನ್ನು ಹೆಸರಿಸಬಹುದು.

ಸೃಜನಶೀಲ ಲೇಖಕರಾದ ಎಸ್.ಎಲ್. ಭೈರಪ್ಪನವರ ದಾಟು ಕಾದಂಬರಿಯು ೧೯೭೩ರಲ್ಲಿ ಪ್ರಥಮ ಮುದ್ರಣ ಕಂಡ ೧೧ನೇ ಕೃತಿಯ ಕಾದಂಬರಿಯಾಗಿದೆ. ಮತ್ತು ೧೯೭೫ರಲ್ಲಿ ದಾಟು

ಕಾದಂಬರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂದಿದೆ. ಇವರ ಕಾದಂಬರಿಯಲ್ಲಿ ಎದ್ದು ಕಾಣುವ ಗುಣವೆಂದರೆ ವೈಚಾರಿಕತೆ, ಜನಪ್ರಿಯತೆ, ವಸ್ತುವೈವಿಧ್ಯತೆ ವಿವರಣಾತ್ಮಕ ಬರವಣಿಗೆಯ ಕಥನ ಶೈಲಿಯಾಗಿದೆ. ಈ ವೈಚಾರಿಕತೆ ಅವರ ಬಲವಾದ ಸಾಂಸ್ಕೃತಿಕ ಅವಸ್ಥೆಗಳು ಮತ್ತು ಮೌಲ್ಯನಿಷ್ಠೆಯ ಮೂಲಕ ನಮಗೆ ಕಾಣಿಸಿಕೊಳ್ಳುತ್ತದೆ.

ಎಸ್.ಎಲ್. ಭೈರಪ್ಪನವರ ದಾಟು ಕಾದಂಬರಿಯು ತನ್ನ ಸಮಕಾಲೀನ ಸಾಮಾಜಿಕ ವ್ಯವಸ್ಥೆಯ ಅನೇಕ ಜಟಿಲ ಅಂಶಗಳನ್ನು ಒಳಗೊಂಡ ಕೃತಿ. ಜಾತಿ ವ್ಯವಸ್ಥೆಯ ಸಮಸ್ಯೆ, ಅಂತರ್ಜಾತೀಯ ವಿವಾಹ ಸಮಸ್ಯೆ, ಹರಿಜನರ ಸಮಸ್ಯೆಗಳು ಪ್ರಸ್ತುತ ಸಮಾಜದಲ್ಲಿ ಹೇಗಿವೆ ಎಂಬುದನ್ನು ಈ ಕೃತಿ ವಿವರಿಸುತ್ತಾ ಹೋಗಿರುವುದನ್ನು ಕಾಣಬಹುದು. ಪುರಾಣ, ಸಮಾಜಶಾಸ್ತ್ರ, ಜನಪದ, ಧರ್ಮ, ತತ್ವ, ಸಮಕಾಲೀನತೆ, ಸಂಪ್ರದಾಯ ಈ ಅಂಶಗಳು ಕಥೆಯ ಬೆಳವಣಿಗೆಯಲ್ಲಿ ಪ್ರಮುಖವಾದ ಪಾತ್ರವಹಿಸುತ್ತವೆ. ಗುರುತಿಸಬಹುದಾದ ಮತ್ತೊಂದು ಮುಖ್ಯ ಅಂಶವೆಂದರೆ, ಕಾದಂಬರಿಯಲ್ಲಿ ಬಳಸಲಾಗಿರುವ ಗ್ರಾಮ್ಯ ಭಾಷೆಯ ಸೊಗಡು. ಈ ಗ್ರಾಮ್ಯ ಭಾಷೆಯ ಶೈಲಿಯು ಕಥೆ ನಡೆದಿರಬಹುದಾದ ಕಾಲ್ಪನಿಕ ಪ್ರಸ್ತುತತೆಗೆ ಮೂಲ ಸಾಕ್ಷಿ. ಸಂಭಾಷಣೆಗೆ ಬಳಸಲಾದ ಈ ಭಾಷೆ ಮತ್ತು ಶೈಲಿಯು ಎಷ್ಟು ಶಕ್ತಿಯುತವಾಗಿದೆ ಎಂದರೆ ಓದುಗನ ತಲ್ಲೀನತೆಯನ್ನು ಅತ್ಯಂತ ಪರಿಣಾಮಕಾರಿಯಾಗಿ ಹಿಡಿದಿಡುವಷ್ಟು ಪರಿಣಾಮಕಾರಿಯಾಗಿ ಮೂಡಿಬಂದಿದೆ. ಅಲ್ಲಲ್ಲಿ ಗ್ರಾಮೀಣರ ಗಾದೆ ಮಾತುಗಳನ್ನು ಬಳಸಿರುವುದನ್ನು ಕಾಣಬಹುದಾಗಿದೆ. ದಾಟು ಕಾದಂಬರಿಯು ವಿವಾದಕ್ಕೆ ಒಳಗಾಗಿ ಬರವಣಿಗೆಯ ಉತ್ತಮ ಮಾದರಿಯ ಕಾದಂಬರಿಯಾಗಿದೆ.

## ಅಧ್ಯಯನದ ಉದ್ದೇಶ

ಸೃಜನಶೀಲ ಲೇಖಕರಾದ ಭೈರಪ್ಪನವರು ಕನ್ನಡ ಕಾದಂಬರಿ ಕ್ಷೇತ್ರದಲ್ಲಿ ಚಿರಪರಿಚಿತರು. ಇವರ ದಾಟು ಕಾದಂಬರಿ ಭಾರತೀಯ ಭಾಷೆಗಳಲ್ಲಿ ಬಂದಿರುವ ಕಾದಂಬರಿಗಳಲೆಲ್ಲ ವಿಶಿಷ್ಟವಾದ ಕೃತಿ ಎಂದು ಪರಿಗಣಿತವಾಗಿದೆ. ಭಾರತದ ಎಲ್ಲಾ ಭಾಷೆಗಳಿಗೂ, ಇಂಗ್ಲೀಷ್‌ಗೂ, ಅನುವಾದವಾಗಿದ್ದೂ, ಕನ್ನಡದಲ್ಲಿ ಅಪಾರವಾದ ಮಧ್ಯಮ ವರ್ಗದ ಓದುಗರನ್ನು ಸೃಷ್ಟಿಸಿದವು. ವೆಂಕಟರಮಣಯ್ಯ ಊರಿನ ತಿರುಮಲ ದೇವಸ್ಥಾನದ ಅರ್ಚಕ, ಅವನ ಮಕ್ಕಳಾದ ವೆಂಕಟೇಶ ಮತ್ತು ಸತ್ಯಭಾಮ ಪರಸ್ಪರ ವಿರುದ್ಧ ವ್ಯಕ್ತಿತ್ವವುಳ್ಳವರು. ಸತ್ಯಭಾಮ ಜಾತಿ, ಮತ ಎಲ್ಲವೂ ಸುಳ್ಳು ಎಂದು ಹೇಳಿ ಶೂದ್ರನಾದ ಶ್ರೀನಿವಾಸನನ್ನು ಮದುವೆಯಾಗಲು ಇಚ್ಚಿಸುತ್ತಾಳೆ. ಇದು ಧರ್ಮಶ್ರದ್ಧೆಯುಳ್ಳ ವೆಂಕಟರಮಣಯ್ಯನವರಿಗೆ ಇಷ್ಟವಾಗದೆ ಅವಳಿಗೆ ಚಪ್ಪಲಿಯಿಂದ ಹೊಡೆಯುತ್ತಾರೆ. ವೆಂಕಟರಮಣಯ್ಯನವರು ಕಾದಂಬರಿಯ ಕೊನೆಯಲ್ಲಿ ಅರೆಹುಚ್ಚಿನ ಸ್ಥಿತಿಯಲ್ಲಿದ್ದರೂ ಸಹ ಸತ್ಯಭಾಮಳಿಗೆ ಯಜ್ಞೋಪವೀತ ಧಾರಣೆಯನ್ನು ಮಾಡುವ ಮೂಲಕ ನೆಮ್ಮದಿಯನ್ನು ಕಂಡವಳು. ಪುರಾಣ, ಸಮಾಜಶಾಸ್ತ್ರ, ಮೂಢನಂಬಿಕೆ, ಧರ್ಮ ಮುಂತಾದವುಗಳಲ್ಲಿ ಜಾತಿಯೊಳಗಿನ ಸಂಬಂಧಗಳ ಬಿರುಕನ್ನು ಪತ್ತೆ ಹಚ್ಚುವ ಕಾರ್ಯವನ್ನು ಲೇಖಕರು, ಸತ್ಯಭಾಮಾ, ಅವಳ ತಂದೆ ವೆಂಕಟರಮಣಯ್ಯ, ಅಣ್ಣ ವೆಂಕಟೇಶ, ಮಂತ್ರಿ ಮೇಲಗಿರಿಗೌಡ ಮುಂತಾದ ಪಾತ್ರಗಳ

ಮೂಲಕ ವಿವರಿಸುತ್ತಾರೆ. ಅಸಮಾನತೆಯ ನಾಡಿನಲ್ಲಿ ಅಂತರ್ಜಾತೀಯ ಮದುವೆಗಳು ಸಮಾನತೆಯನ್ನು ತರುವಲ್ಲಿ ಸೋಲುತ್ತವೆ ಎನ್ನುವುದನ್ನು ಕೂಡ ಶ್ರೀನಿವಾಸ-ಸತ್ಯಭಾಮ ಮತ್ತು ಶ್ರೀನಿವಾಸ-ಮೀರಾಳ ಮುರಿದ ಬದುಕಿನ ಮೂಲಕ ಸೂಚಿಸುತ್ತಾರೆ. ಇವೆಲ್ಲವುಗಳನ್ನು ಅಧ್ಯಯನ ಮಾಡುವುದು ದಾಟು ಕಾದಂಬರಿ ಅಧ್ಯಯನದ ವಿಶ್ಲೇಷಣೆಯ ಒಂದು ಉದ್ದೇಶವಾಗಿದೆ.

ಮೇಲ್ವರ್ಗದವರು ಕೆಳವರ್ಗದವರ ಜೊತೆಯಲ್ಲಿ ಪರಸ್ಪರ ಪ್ರೀತಿ, ಪ್ರೇಮಗಳಿಂದ ಒಂದುಗೂಡಿದರೆ ಮಾತ್ರ ಜಾತಿ ಪದ್ಧತಿಯನ್ನು ನಿರ್ಮೂಲನೆ ಮಾಡಬಹುದು ಎಂಬ ದೃಷ್ಟಿಯನ್ನು ಸತ್ಯಭಾಮಳು ಹೊಂದಿರುವುದನ್ನು ಕಾಣಬಹುದು. ಅಂಬೇಡ್ಕರ್ ಮತ್ತು ಗಾಂಧೀಜಿಯವರ ಚಿಂತನೆಗಳು ಪರಸ್ಪರ ಮನೆಯೊಂದರಲ್ಲೆ ಮುಖಾಮುಖಿಯಾಗುವ ಬೆಟ್ಟಯ್ಯ ಗಾಂಧೀವಾದಿಯಾದರೆ, ಅವರ ಮಗ ಮೋಹನದಾಸ ಕ್ರಾಂತಿಕಾರಿಯಾಗಿದ್ದಾನೆ. ವೆಂಕಟರಮಣಯ್ಯ ಹರಿಜನ ಕನ್ಯೆಯೊಂದಿಗೆ ಸಂಬಂಧ ಬೆಳೆಸುತ್ತಾನೆ. ಪಾಪಪ್ರಜ್ಞೆ ಜಾಗೃತವಾಗಿ ಅವರು ಸಹ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಮೋಹನದಾಸನೇ ಇದಕ್ಕೆ ಕಾರಣನಾಗಬೇಕಾಗುತ್ತದೆ. ಏಕೆಂದರೆ ಈ ಸಂಬಂಧ ಕುರಿತು ಅವನು ವೆಂಕಟರಮಣಯ್ಯನೊಡನೆ ಜಗಳವಾಡುತ್ತಾನೆ. ಮೇಲ್ಜಾತಿಯವರ ದೌರ್ಜನ್ಯದ ವಿರುದ್ಧ ಹೋರಾಡುವುದಕ್ಕಾಗಿ ಸತ್ಯಭಾಮೆ ಮೋಹನದಾಸನನ್ನು ಬೆಂಬಲಿಸುತ್ತಾಳೆ. ಅವನಿಗೆ ಒಂದು ಪುಸ್ತಕವನ್ನು ಸಹ ಬರೆದುಕೊಡುತ್ತಾಳೆ. ಈ ಆಯಾಮವನ್ನು ಅಧ್ಯಯನ ಮಾಡುವುದು ದಾಟು ಕಾದಂಬರಿ ವಿಶ್ಲೇಷಣೆಯ ಮತ್ತೊಂದು ಉದ್ದೇಶವಾಗಿದೆ.

ಮೋಹನದಾಸ ಹರಿಜನರನ್ನೆಲ್ಲ ಕರೆದುಕೊಂಡು ಊರಿನ ದೇವಾಲಯ ಪ್ರವೇಶ ಮಾಡಲು ಪ್ರಯತ್ನಿಸುತ್ತಾನೆ. ಆದರೆ ಒಮ್ಮೆಲೆ ಪ್ರಖರತೆಯಿಂದ ತಲೆತಿರುಗಿ ಬಿದ್ದ ಕಾರಣ ಅವನ ಹಿಂದೆ ಬಂದಿದ್ದ ಹರಿಜನರು ಸಹ ಒಳಹೋಗಲು ಹೆದರುತ್ತಾರೆ. ಮದುವೆ, ದೇವಾಲಯ ಪ್ರವೇಶ ಯಾವುದೂ ಸಾಧ್ಯವಾಗುವುದಿಲ್ಲ. ಈ ನಿರ್ಬಂಧಗಳನ್ನು ದಾಟಲು ಮೋಹನದಾಸ ಕಾದಂಬರಿಯ ಕೊನೆಗೆ ಊರಿನ ಕೆರೆಗೆ ಡೈನಾಮೆಟ್ ಇಟ್ಟು ಸಿಡಿಸುತ್ತಾನೆ. ಊರೆಲ್ಲ ದೇವಸ್ಥಾನವು ನೀರಿನಲ್ಲಿ ಮುಳುಗಿ ಮೋಹನದಾಸನೂ ಸಾಯುತ್ತಾನೆ. ಸತ್ಯಭಾಮೆ ಬ್ರಾಹ್ಮಣಿಕೆಯ ಜನಿವಾರವನ್ನು ಕಿತ್ತು ಬಿಸುಟು ಉಳಿಯುತ್ತಾಳೆ. ಈ ಆಯಾಮವನ್ನು ಅಧ್ಯಯನ ಮಾಡುವುದು ದಾಟು ಕಾದಂಬರಿ ವಿಶ್ಲೇಷಣೆಯ ಮತ್ತೊಂದು ಉದ್ದೇಶವಾಗಿದೆ.

ಮೇಲ್ವರ್ಗದ ಜಾತಿಯವರಾದವರಿಗೆ ಸಿಗುವ ಗೌರವಗಳು, ಮರ್ಯಾದೆಗಳು, ಸನ್ಮಾನಗಳು, ಕೆಳವರ್ಗದವರಿಗೆ ಏಕೆ ಸಿಗುತ್ತಿಲ್ಲ? ಆದರೆ ಆ ಜಾತಿಯ ಬಗ್ಗೆ ತಾವು ಹಾಗಾಗಿದ್ದರೆ? ಎನ್ನುವ ಭಾವವನ್ನು ಹುಟ್ಟುಹಾಕುವಲ್ಲಿ ಮುಖ್ಯವಾಗಿರುತ್ತದೆಯೇನೊ ಅನಿಸುತ್ತದೆ. ಆದರೆ ಒಮ್ಮೊಮ್ಮೆ ವೈಯಕ್ತಿಕ ಸಾಧನೆಗಳಿಂದ

ಉತ್ಕೃಷ್ಟ ಸ್ಥಾನಕ್ಕೇರಿದ ವ್ಯಕ್ತಿಯು ಸನ್ಮಾನಕ್ಕೊಳಗಾಗುವುದನ್ನು ಕಾಣಬಹುದು. ಆದರೆ ಆತ ಕೆಳ ಜಾತಿಯವನು ಎಂಬ ಅಂಶ ತಿಳಿದ ಕೂಡಲೇ ನಡೆಯುವ ವರ್ತನೆಗಳೇ ಬೇರೆ ವಿಧವಾಗಿರುತ್ತದೆ. "ಚಿಗುಟಿ ಅಳಿಸಬೇಕು, ತೂಗಿದಂತೆಯೂ ಮಾಡಬೇಕು" ಎನ್ನುವುದು ಇಂದಿನ ರಾಜಕೀಯ ಪರಿಸ್ಥಿತಿಯಾಗಿದೆ. ಉದ್ಧಾರದ ನೆಪದಿಂದ ಕಾರ್ಯಕ್ರಮಗಳನ್ನು ಮಾಡಲು ಕೆಳವರ್ಗದವರು ಇರಲೇಬೇಕು. ಅವರೇ ಇಲ್ಲದಿದ್ದರೆ ಯಾರಿಗಾಗಿ ರಾಜಕೀಯ ಭಾಷಣ ಕಾರ್ಯಕ್ರಮಗಳು? ಇಂತಹ ಸಂದಿಗ್ದ ಪರಿಸ್ಥಿತಿಯಲ್ಲಿ ದಾಟು ಕಾದಂಬರಿಯನ್ನು ಅಧ್ಯಯನ ಮಾಡುವುದು ಈ ವಿಶ್ಲೇಷಣೆಯ ಪ್ರಮುಖವಾದ ಉದ್ದೇಶವಾಗಿದೆ.

## ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಅಧ್ಯಯನವು ಎಸ್.ಎಲ್. ಭೈರಪ್ಪನವರ ದಾಟು ಕಾದಂಬರಿಯನ್ನು ಮೂಲ ಪಠ್ಯವನ್ನಾಗಿ ಆಯ್ದುಕೊಳ್ಳಲಾಗಿದೆ. ದಾಟು ಕಾದಂಬರಿಗೆ ಬಂದಿರುವ ವಿಮರ್ಶಾ ಲೇಖನಗಳನ್ನು ಸಹ ಅಧ್ಯಯನಕ್ಕೆ ಒಳಪಡಿಸಲಾಗಿದೆ. ತಿರುಮಲಾಪುರದ ಶ್ರೀನಿವಾಸನ ದೇವಸ್ಥಾನದಿಂದ ಪ್ರಾರಂಭವಾಗುತ್ತದೆ. ಮಧ್ಯದಲ್ಲಿ ಸಾಮಾಜಿಕ ಸಮಸ್ಯೆಗಳು ಕಾಣಿಸಿಕೊಳ್ಳುತ್ತವೆ ಮತ್ತು ಅವುಗಳಿಗೆ ಪರಿಹಾರವನ್ನು ಹುಡುಕುವುದನ್ನು ಕಾಣಬಹುದು. ಕಾದಂಬರಿಯ ಕೊನೆಯಲ್ಲಿ ದೇವಸ್ಥಾನವು ನೀರಿನಲ್ಲಿ ಮುಳುಗಡೆಯಾಗುವುದನ್ನು ಕಾಣಬಹುದು. ಬಡವರಾದ ಜನಸಾಮಾನ್ಯರು ದೊಡ್ಡ ತಿರುಪತಿಗೆ ಹೋಗಲು ಹಣವಿಲ್ಲದವರು ಸಹ ಭಕ್ತಿಯಿಂದಲೇ ಈ ಶ್ರೀನಿವಾಸನಿಗೆ ಪೂಜೆಯನ್ನು ಮಾಡಿಸಿದರೆ ಇಷ್ಟಾರ್ಥ ಸಿದ್ಧಿಯಾಗುತ್ತದೆ ಎಂಬ ಪುರಾಣದ ಐತಿಹ್ಯವಿರುವುದನ್ನು ಕಾದಂಬರಿಯಲ್ಲಿ ಕಾಣಬಹುದಾಗಿದೆ.

ಕಾದಂಬರಿಯಲ್ಲಿ ಕಂಡುಬರುವಂತಹ ರಾಜಕಾರಣಿಗಳು ಜನಸಾಮಾನ್ಯರಿಗೆ ಆಸೆ ಆಕಾಂಕ್ಷೆಗಳನ್ನು ಒಡ್ಡಿ ಜನರುಗಳ ಮನಸ್ಸನ್ನು ಗೆಲ್ಲುತ್ತಾರೆ. ಬೂದಗುಂಬಳಕಾಯಿಯ ಕಥೆಯನ್ನು ಹೇಳುತ್ತಾ, ರೈತ ಸಮಾಜಕ್ಕೆ ತಮ್ಮ ಜೀವನವನ್ನು ತೆಗೆದಿಟ್ಟುರುವುದಾಗಿ ತಿಳಿಸಿದರು. ಆದರೆ ಸಮಾಜದ ಜನರನ್ನು ಹೂವಿನ ದಳಗಳನ್ನಾಗಿ ಹೇಗೆ ಪರಿವರ್ತಿಸುತ್ತಿದ್ದಾರೆ ಎಂಬುದನ್ನು ಕಾದಂಬರಿಯಲ್ಲಿ ಕಾಣಬಹುದು. ಆಧುನಿಕ ಸಮಾಜದಲ್ಲಿ ಕಂಡುಬರುವಂತಹ ಅಂತರ್ಜಾತಿ ವಿವಾಹ, ದೇವಾಲಯದ ಮುಕ್ತ ಪ್ರವೇಶ, ಸಹಪಂಕ್ತಿ ಭೋಜನ ಇನ್ನು ಮುಂತಾದವುಗಳನ್ನು ಅಧ್ಯಯನದ ವ್ಯಾಪ್ತಿಗೆ ಅಳವಡಿಸಿಕೊಳ್ಳಲಾಗಿದೆ.

## ಅಧ್ಯಯನದ ವಿಧಾನ

ಪ್ರಸ್ತುತ ಅಧ್ಯಯನವು ದಾಟು ಕಾದಂಬರಿಯನ್ನು ವಿಶ್ಲೇಷಿಸುವ ಅಧ್ಯಯನವಾಗಿದೆ. ಈ ಅಧ್ಯಯನದ ಪ್ರಮುಖ ವಿಧಾನಗಳು ಈ ಕೆಳಗಿನಂತಿವೆ.

೧. ಅಂತರ್ಜಾತಿ ವಿವಾಹಗಳು ಸಮಾಜದಲ್ಲಿ ಜನರ ನೆಮ್ಮದಿ, ಸಂತೋಷ, ಮತ್ತು ಸಮಾನತೆಯನ್ನು ತರುವಲ್ಲಿ ಸೋಲುತ್ತವೆ ಎನ್ನುವ ವಿಷಯಗಳನ್ನು ಕುರಿತು ಚರ್ಚಿಸಲಾಗುವುದು.

೨. ಆಧುನಿಕ ಸಮಾಜದಲ್ಲಿ ಜಾತಿ ಸಮಸ್ಯೆಯ ಆಯಾಮವು ಯಾವ ರೀತಿಯಲ್ಲಿ ಹೇಗೆ ಕೆಲಸ ಕಾರ್ಯಗಳನ್ನು ಮಾಡುತ್ತವೆ ಎನ್ನುವುದನ್ನು ತಿಳಿಯುವುದಾಗಿದೆ.

೩. ದೇವಾಲಯದ ಮುಕ್ತ ಪ್ರವೇಶ, ಸಹಪಂಕ್ತಿ ಭೋಜನ ಮತ್ತು ಹೆಣ್ಣು ಗಂಡಿನ ಸಂಬಂಧದಲ್ಲಿ ಜಾತಿ ಸಮಸ್ಯೆಯು ಹೇಗೆ ತೀವ್ರವಾಗಿ ಕಾಡುತ್ತದೆ ಎನ್ನುವುದನ್ನು ಗುರುತಿಸುವ ಪ್ರಯತ್ನ ಮಾಡಲಾಗುವುದು.

೪. ಹರಿಜನ ಗಿರಿಜನ ಕೇರಿಗಳಿಗೆ ಮೇಲ್ವರ್ಗದವರು ಹೋದರೆ ಅವರ ಜೊತೆಯಲ್ಲಿಯೆ ಲಕ್ಷ್ಮೀಯು ಹೋಗುತ್ತಾಳೆ ಎನ್ನುವ ನಂಬಿಕೆಯನ್ನು ಹುಡುಕುವುದಾಗಿದೆ.

೫. ಪ್ರತಿಯೊಬ್ಬ ಪಂಗಡದವರಿಗೂ ಹೋಮ, ಹವನ ಯಜ್ಞೋಪವಿತ ಧಾರಣೆಯನ್ನು ಮಾಡಿ ಜನಿವಾರ ಹಾಕುವೆ ಎಂಬ ಹೇಳಿಕೆಯ ಹಿಂದಿನ ನಿರೂಪಣಾ ಧೋರಣೆಯನ್ನು ಗುರುತಿಸುವ ಪ್ರಯತ್ನ ಮಾಡಲಾಗುವುದು.

೬. ಮೇಲ್ವರ್ಗದವರು ಕೆಳವರ್ಗದವರ ಸ್ತ್ರೀಯರ ಜೊತೆಯಲ್ಲೆ ಲೈಂಗಿಕ ಅಪೇಕ್ಷೆಯನ್ನು ಈಡೇರಿಸಿಕೊಳ್ಳುವುದನ್ನು ಕುರಿತು ಚರ್ಚಿಸಲಾಗುವುದು.

೭. ಬಿಳಿ ಬಣ್ಣದ ಮಾದಿಗ ಪುರುಷ ಬ್ರಾಹ್ಮಣರ ಕನ್ಯೆಯನ್ನು ಮದುವೆಯಾಗಿ ಸುಖವಾಗಿ ಸಂಸಾರ ಮಾಡುತ್ತಾ, ಕೊನೆಗೆ ಪಶ್ಚಾತಾಪ ಪಡುತ್ತಾ ಹತ್ಯೆ ಮಾಡಿಕೊಳ್ಳುವುದನ್ನು ಚರ್ಚಿಸಲಾಗುವುದು.

## ಅಧ್ಯಯನದ ಮಹತ್ವ

ದಾಟು ಕಾದಂಬರಿ ಒಂದು ವಿಶ್ಲೇಷಣೆಯು ತನ್ನದೆ ಆದ ಮಹತ್ವವನ್ನು ಪಡೆದುಕೊಂಡಿದೆ. ಇದುವರೆಗೆ ದಾಟು ಕಾದಂಬರಿ ಕುರಿತು ನಡೆದಿರುವ ಅಧ್ಯಯನಗಳನ್ನು ಪರಿಶೀಲಿಸಲಾಗಿದೆ. ಜಾತಿ ಅಸಮಾನತೆಯನ್ನು ಮತ್ತು ಅದರಿಂದ ಉಂಟಾಗುವ ಸಾಮಾಜಿಕ ಪರಿಣಾಮಗಳನ್ನು ದಾಟು ಕಾದಂಬರಿ ಹಿಡಿದಿಟ್ಟಿರುವ ಬಗೆಯನ್ನು ವಿಶ್ಲೇಷಿಸಲಾಗಿದೆ. ವರ್ಗ ಅಸಮಾನತೆಯನ್ನು ಮತ್ತು ಅದರಿಂದ ಉಂಟಾಗುವ ಸಾಮಾಜಿಕ, ಸಾಂಸ್ಕೃತಿಕ ಪರಿಣಾಮಗಳನ್ನು ದಾಟು ಕಾದಂಬರಿ ಹಿಡಿದಿಟ್ಟಿರುವ ಬಗೆಯನ್ನು ವಿಶ್ಲೇಷಿಸಲಾಗಿದೆ. ಜಾತಿ ಅಸಮಾನತೆಯನ್ನು ಮೀರುವ ಸಾಮಾಜಿಕ ಬದುಕಿನಲ್ಲಿರುವ ಸಾಧ್ಯತೆಗಳು ಯಾವುವು ಎಂಬುದನ್ನು ಕಾದಂಬರಿ ಶೋಧಿಸಿರುವ ಬಗೆಯನ್ನು ಚರ್ಚಿಸಲಾಗಿದೆ. ಜಾತಿ ಅಸಮಾನತೆಯನ್ನು ಕೌಟುಂಬಿಕ ಜೀವನದಲ್ಲಿ ಹಾಗೂ ಸಾಂಸಾರಿಕ ಜೀವನದಲ್ಲಿ ಎದುರಿಸುವ ಹಾಗೂ ದಾಟುವ ಸಮಸ್ಯೆಗಳ ಒಳಸೂಕ್ಷ್ಮಗಳನ್ನು ಕಾದಂಬರಿ ನಿರೂಪಿಸಿರುವ ಬಗೆಯನ್ನು ವಿಶ್ಲೇಷಿಸಲಾಗಿದೆ.

***

## ಅಧ್ಯಾಯ ೨

# ದಾಟು ಕಾದಂಬರಿಯಲ್ಲಿ ಜಾತಿ ಸಮಸ್ಯೆಯ ಸಂಘರ್ಷಗಳು

ಮೇಲ್ಜಾತಿ ಮತ್ತು ಕೆಳಜಾತಿ ನಡುವೆ ನಡೆಯುವ ಹಾಗೂ ಉಪಜಾತಿಗಳ ನಡುವೆ ನಡೆಯುವ ಗಲಾಟೆಗಳು, ಘರ್ಷಣೆಗಳು ಹಾಗೂ ಸಂಘರ್ಷಗಳನ್ನು ಜಾತಿ ಸಮಸ್ಯೆಯ ಸಂಘರ್ಷಗಳು ಎಂದು ಕರೆಯಬಹುದಾಗಿದೆ. ದಾಟು ಕಾದಂಬರಿಯಲ್ಲಿಯೂ ಸಹ ಬ್ರಾಹ್ಮಣರು ಹಾಗೂ ಶೂದ್ರ ವರ್ಗಗಳು ಹಾಗೂ ಅವರ ಬದುಕಿನ ಸೂಕ್ಷ್ಮಗಳು ನಿರೂಪಣೆಗೊಂಡಿವೆ. ಸಮಕಾಲೀನ ಸಮಾಜದಲ್ಲಿ ನಡೆಯುವ ಜಾತಿ ಸಂಘರ್ಷದ ಸಂಬಂಧಗಳನ್ನು ಹಾಗೂ ಹರಿಜನರ ದೇವಾಲಯದ ಪ್ರವೇಶವನ್ನು ಕುರಿತು ವಿಶ್ಲೇಷಣೆ ಮಾಡಲಾಗಿದೆ. ಹತ್ತನೇ ಶತಮಾನದಲ್ಲಿ ಪಂಪನು ಸಹ ಆದಿಪುರಾಣ ಗ್ರಂಥದಲ್ಲಿ "ಮನುಷ್ಯ ಜಾತಿ ತಾನೊಂದೆ ವಲಂ" ಎಂಬ ಮಾತನ್ನು ಬಳಸಿರುವುದನ್ನು ಸಹ ಕಾಣಬಹುದಾಗಿದೆ.

ವರ್ಣ ವ್ಯವಸ್ಥೆಯಿಂದ ಆರಂಭವಾದ ಸಾಮಾಜಿಕ ವಿಂಗಡಣೆ ಕ್ರಮೇಣ ಜಾತಿ ಮತಗಳ ವ್ಯವಸ್ಥೆಯಾಗಿ ಪರಿಣಮಿಸಿದೆ. ಭಾರತದ ಹಳ್ಳಿಗಳಲ್ಲಿ, ಪಟ್ಟಣಗಳಲ್ಲಿ ಬಲವಾಗಿ ಬೇರೂರಿ ಹೇಗೆ ಸಾಮಾಜಿಕ ಒಡಕಿಗೆ, ವಿದ್ವೇಷಕ್ಕೆ ಕಾರಣವಾಯಿತು ಮತ್ತು ಇದರಿಂದಾಗಿ ಮೇಲು ಕೀಳುಗಳ, ಶೋಷಿತ ವರ್ಗಗಳ ನಿರ್ಮಾಣವಾಯಿತು ಎಂಬುದರ ಬಗೆಗೆ ಪ್ರಭಾವ ಬೀರುತ್ತದೆ. ದಾಟು ಕಾದಂಬರಿಯ ಜೊತೆಗೆ ಈ ಜಾತಿ ಮತಗಳ ಪದ್ಧತಿಯಿಂದಾಗಿ, ವೈಯಕ್ತಿಕ ಹಾಗೂ ಸಾಮಾಜಿಕ ಜೀವನದಲ್ಲಿ ಉಂಟಾಗುವ ಘರ್ಷಣೆ, ಗೊಂದಲಗಳಿಂದಾಗಿ ಸಮಾಜದ ಸರ್ವಾಂಗೀಣ ಪ್ರಗತಿಯ ಹಾದಿಯಲ್ಲಿ ಮಾರಕವಾದ ದಾಟುಗಳನ್ನು ನಿರ್ಮಿಸುತ್ತವೆ ಎಂಬ ವಿಶ್ಲೇಷಣೆ ಅತಿ ಸೂಕ್ಷ್ಮವಾಗಿ ಮೂಡಿಬಂದಿದೆ. ಶತಮಾನಗಳಿಂದಲೂ ನಡೆದುಬಂದು ಇನ್ನೂ ಪ್ರಚಲಿತವಿರುವ ಸಮಸ್ಯೆಗಳು, ಘರ್ಷಣೆಗಳು, ರೂಢಿಗಳು, ಅವುಗಳನ್ನೆದುರಿಸುತ್ತಾ ಬದುಕುತ್ತಿರುವ ಪಾತ್ರಗಳು ಇವುಗಳಿಂದಾಗಿ ಇಡೀ ಕಾದಂಬರಿ ಸಾಮಾಜಿಕ ಮಾದರಿಗೆ ಸೇರಿದ ಕಾದಂಬರಿಯಾಗುತ್ತದೆ.

ವೈದಿಕ ಧರ್ಮಕ್ಕೆ ಸೇರಿದ ಬ್ರಾಹ್ಮಣರು ಹಾಗೂ ಸಮಾಜದಲ್ಲಿ ಮೇಲುವರ್ಗಕ್ಕೆ ಸೇರಿದವರೂ ಆದ ತಿರುಮಲ ದೇವರ ಅರ್ಚಕ ವೆಂಕಟರಮಣಯ್ಯ. ಇವರ ಮಗಳು ಸತ್ಯಭಾಮ ಮತ್ತು ಶೂದ್ರನಾದ ಮೇಲಗಿರಿಗೌಡನ ಮಗನಾದ ಶ್ರೀನಿವಾಸನನ್ನು ಪರಸ್ಪರವಾಗಿ ಪ್ರೀತಿಸುತ್ತಾರೆ. ಪ್ರೇಮ ವಿವಾಹಕ್ಕೆ ಇಬ್ಬರೂ ಸಹ ಒಪ್ಪಿಗೆಯನ್ನು ಸೂಚಿಸಿ ಮದುವೆಯಾಗಲು ನಿರ್ಧರಿಸಿದ್ದಾರೆ. ಪೋಸ್ಟ್ ಮಾಸ್ಟರ್ ಆದ ನಾರಣಯ್ಯ ನಾಮಕರಣ ಸಮಾರಂಭಕ್ಕೆ ಬರುವಾಗ ಒಂದು ಕಾಗದವನ್ನು ವೆಂಕಟರಮಣಯ್ಯನವರ ಕೈಗೆ ಕೊಟ್ಟರು. ಆ ಕಾಗದದಲ್ಲಿ ಬರೆದಿರುವುದನ್ನು ನೋಡಿ ಓದಿಕೊಂಡು ಅಸಮಾಧಾನವೂ ಉಂಟಾಯಿತು. ಈ ವಿಷಯವನ್ನು ತಿಳಿದು ವೆಂಕಟರಮಣಯ್ಯನವರು ಮಗನಾದ ವೆಂಕಟೇಶನಿಗೆ ತಿಳಿಸಿದರು. ವೆಂಕಟೇಶ ಅವರನ್ನು ಸಮಾಧಾನ ಮಾಡಿ ಬ್ರಾಹ್ಮಣರ ಭೋಜನ ಮುಗಿಯುವವರೆಗೂ ಅತ್ತ ಸುಳಿಯ ಬಾರದೆಂದು ಹೇಳಿ ಅವರನ್ನು ದೂರ ಕಳಿಸುತ್ತಾನೆ. ವೆಂಕಟೇಶನ ತಿಳುವಳಿಕೆಯಂತೆ, ಸತ್ಯ ಶ್ರೀನಿವಾಸನನ್ನೇ ಮದುವೆಯಾಗಲು ನಿರ್ಧಾರ ಮಾಡಿದರೂ ಸಹ ಶ್ರೀನಿವಾಸನ ತಂದೆ, ತಾಯಿ ಮತ್ತು ಪಟೇಲರು ಈ ಮದುವೆಗೆ ಒಪ್ಪುವುದಿಲ್ಲ. ಸತ್ಯಭಾಮೆಯು ತಂದೆಯವರಿಗೆ ಜಾತಿ ಕುಲಗಳ ಬಗ್ಗೆ ನನ್ನ ಅಭಿಪ್ರಾಯ, ಅನಿಸಿಕೆಗಳು, ನಿಮಗೆ ಗೊತ್ತಿದೆ. ನೀವು ಮತ್ತು ಊರಿನ ಇತರರು ಇದನ್ನು ಅನೀತಿ, ಜಾತಿಬಾಹೀರ ಶುದ್ಧತಪ್ಪು ಎನ್ನಬಹುದು. ಆದರೆ ಇದು ಅತ್ಯಂತ ಸಮರ್ಪಕವಾದ ನೀತಿಯುತ ನಿರ್ಣಯ ಎಂದು ನನ್ನ ಶುದ್ಧ ನಂಬಿಕೆಯೆಂದು ಭಾವಿಸಿದ್ದೇನೆ. ಎದುರು ನಿಂತು ಮದುವೆಯನ್ನು ಮಾಡಿಕೊಡುವುದು ನಿಮಗೆ ಸಾಧ್ಯವಾಗದಿರಬಹುದು. ಆದರೆ ಅಲ್ಲಿಂದಲೇ ಕಾಗದದ ಮುಖಾಂತರ ಆಶೀರ್ವಾದವನ್ನು ಕಳಿಸಿ ಎಂದು ಬರೆದಿದ್ದಳು. ಸತ್ಯಭಾಮಳ ಬಗ್ಗೆ ಅಸಮಾಧಾನ ಉಂಟಾಗಿ ಆಕೆಯ ಮೇಲೆ ಕೋಪವು ಬರುತ್ತಿತ್ತು.

ವೆಂಕಟರಮಣಯ್ಯನವರು ಮಗಳು ಎನ್ನುವ ಸಹನೆಯನ್ನು, ಪ್ರೀತಿಯನ್ನು ಮೀರಿ ವೆಂಕಟೇಶನಿಗೆ ಹೇಳಿದರು. 'ಆ ಕಳ್ಳಮುಂಡೆಯ ಕೈಕಾಲುಗಳನ್ನು ಕಟ್ಟಿಕೊಂಡು ಎಳಕೊಂಡು ಬಾ' ಎಂದರು. ಯಾರಾದರೂ ಒಬ್ಬ ವ್ಯವಸಾಯ ಮಾಡುತ್ತಿರುವ ಬ್ರಾಹ್ಮಣ ಪುರುಷನಿಗೆ ಕೊಟ್ಟು ಇನ್ನೂ ಮೂರು ದಿನದಲ್ಲಿ ತಾಳಿ ಕಟ್ಟಸಿ ಬಿಡೋಣ ಎಂದರು. ಕಾಗದದ ಕೊನೆಯಲ್ಲಿ ಬರೆದಿರುವ ವಿಷಯವು ಊರಿಗೆ ಬರಲು ನನಗೆ ಭಯವೇನಿಲ್ಲ. ಒಂದು ಲಕ್ಷ ಜನ ಎದುರಿಗೆ ನಿಂತು ಬೆರೆಳುಮಾಡಿ ತೋರಿಸಿದರೂ ಸಹ ನನ್ನ ನಂಬಿಕೆ ನನ್ನದು, ನನ್ನ ಧೈರ್ಯ ನನ್ನದು ಎಂದು ಬರೆದಿದ್ದಳು. ಸಮಾಜದಲ್ಲಿರುವ ಜನರ ಮುಂದೆ ನಮ್ಮ ಮರ್ಯಾದೆ ಕಳೆಯುವುದಕ್ಕೆ ತಾನೇ ಈ ಮುಂಡೆ ಹುಟ್ಟಿರುವುದು ಎಂದರು. ಮರ್ಯಾದೆ ಉಳಿಯಲ್ಲ ಮುಂದೆ ಅವಳಿಗೆ ಬೇರೆ ಗಂಡು ಸಿಕ್ಕುವುದಿಲ್ಲ. ಅದಕ್ಕೆ ನೀನು ಏನೂ ಆಗಿಲ್ಲ ಎಂದು ಸುಮ್ಮನಿದ್ದುಬಿಡು. ವೆಂಕಟೇಶ ತಂದೆಗೆ ಸಮಾಧಾನದ ಮಾತುಗಳನ್ನು ಹೇಳಿದನು. ಆದರೆ ವೆಂಕಟರಣಯ್ಯನವರು ತಾಯಿ ಇಲ್ಲದ ತಬ್ಬಲಿ ಹುಡುಗಿ ಎಂದರು. ನಾನೇ ತಾಯಿಯಾಗಿ ಸಾಕಿದೆ. ಪಾಪಿ

ಲೌಡಿ ಎಂದು ಬಿಕ್ಕಿಬಿಕ್ಕಿ ಅಳಲು ಪ್ರಾರಂಭಿಸಿದರು. "ಸತ್ಯಭಾಮೆ ಕುದುರೆಯಂಥವಳು ಈ ಕುದುರೆ ಏನೋ ಉಮೇದು ಮಾಡ್ತು ಅಂತ ಆ ಕತ್ತೆಗಳು (ಶೂದ್ರರು) ಒಪ್ಪಬೇಕಲ್ಲ"[೧]. ಬ್ರಾಹ್ಮಣರ ಹುಡುಗಿಯನ್ನು ಮಾಡಿಕೊಂಡು ನಮ್ಮ ಜಾತಿಗೆ ಅವಮಾನ ಮಾಡಬೇಕು ಎಂದು ಆ ಬ್ರಾಹ್ಮಣ ದ್ವೇಷಿ ಬಿಡ್ತಾನೆಯೇ? ಎಂದು ಹೇಳಿದರು.

ವೆಂಕಟೇಶ ವೃದ್ಧ ಪಟೇಲರ ಮನೆಗೆ ಬೇಯಿಸಿದ ಪದಾರ್ಥಗಳನ್ನು ತಂದಾಗ ಪಟೇಲರು "ಬ್ರಾಹ್ಮಣರ ಮನೇಯಲ್ಲಿ ಮಾಡಿದ್ದು ತಾನೇ?"[೨] ಎಂದು ಕೇಳಿದರು. ಅದಕ್ಕೆ ವೆಂಕಟೇಶ "ಬ್ರಾಂಬ್ರು ಅಂದರೆ ಯಾರು?"[೩] ಪೂಜಾರಿಗಳು ಅವರೇ ಮಾಡಿದ್ದಾದರೂ ದೇವರ ಪ್ರಸಾದ ಅಂತ ಮಡಿ ಬರುತ್ತದೆ ಹೊರತು ಇಲ್ಲದೇ ಇದ್ದರೆ ಅದು ಮೈಲಿಗೆಯೇ ಎಂಬ ಮಾತು ವೆಂಕಟೇಶನಿಗೆ ಅಪ್ರಿಯವೆನಿಸಿತು. ಇದುವರೆಗೂ ಈ ವೃದ್ಧ ಪಟೇಲರು ಬ್ರಾಹ್ಮಣರ ಶ್ರೇಷ್ಠತೆಯನ್ನು ಸ್ವೀಕರಿಸಿದ್ದರು. ಈಗ ತಾವು ಬ್ರಾಹ್ಮಣರಿಗಿಂತ ಶ್ರೇಷ್ಠರು ಅಥವಾ ತಮ್ಮ ಶ್ರೇಷ್ಠತೆಯು ಬ್ರಾಹ್ಮಣರದ್ದಕ್ಕಿಂತ ಕಡಿಮೆಯಾದುದ್ದಲ್ಲ ಎನ್ನುತ್ತಿದ್ದಾರೆ. ಇಂತಹ ಹೊಸ ವಿಚಾರಗಳು ತಾವಾಗಿಯೇ ಇವರ ತಲೆಯಲ್ಲಿ ಹುಟ್ಟುವುದಿಲ್ಲವೆಂದು ಬಲ್ಲ ವೆಂಕಟೇಶ ಹೇಳಿದನು. ಹೋಗಲಿ ಅದು ನಿಮ್ಮ ನಿಮ್ಮ ಶ್ರದ್ದೆಯ ವಿಷಯ ಎಷ್ಟಾದರೂ ನೀವು ದೊಡ್ಡವರು, ನಿಮ್ಮಷ್ಟು ಜಪ ತಪ ನಾವೇ ಮಾಡುವುದಿಲ್ಲ ಎಂದಾಗ ಪಟೇಲರಿಗೆ ಸಂತೋಷವಾಯಿತು. ಬ್ರಾಹ್ಮಣರು ಇರುವುದು ದೇವರ ಪೂಜೆ ಮಾಡುವುದಕ್ಕೆ ಮಾತ್ರ ಸೀಮಿತ ಎಂದರು. ಒಂದೊಂದು ಕಡೆ ಕೆಲವು ಪದ್ಧತಿಗಳು, ನಿಯಮಗಳು, ಆಚರಣೆಗಳು ಇರುವುದು ಕಂಡುಬರುತ್ತವೆ.

ಪಟೇಲರು ಹುರುಪಿನಿಂದ (ಸಿಟ್ಟಿನಿಂದ) ಮಾತನಾಡಿದರು. ಕಾಶೀ ಕಡೆಯಿಂದ ಬಂದಿದ್ದ ಠಾಕೂರರು ಗೌಡರಿಗೆ ತಿಳಿಸಿದ್ದ ಅನೇಕ ಸಾಮಾಜಿಕ, ಐತಿಹಾಸಿಕ ಸಂಗತಿಗಳಿವೆ. ವೇದ–ವೇದಾಂತ ಎಲ್ಲ ಮಾಡಿರುವರು ಬ್ರಾಹ್ಮಣರೇ ಅಲ್ಲ ಎಂದರು. ಆದರೆ ಜನಕ ಮಹಾರಾಜರಂತಹ ಕ್ಷತ್ರಿಯರೇ ಮಹಾವೇದ ವಿದ್ಯೆ ಪಂಡಿತರಾಗಿದ್ದರು. ರಾಮ, ಕೃಷ್ಣ ಎಂದು ನಾವು ಯಾವ ಯಾವ ದೇವರುಗಳನ್ನು ಪೂಜೆ ಮಾಡುತ್ತಿರುವ ಅವರೆಲ್ಲ ಕ್ಷತ್ರಿಯರೇ ಅಲ್ವಾ? ಒಟ್ಟಿನಲ್ಲಿ ಬ್ರಹ್ಮವಿದ್ಯೆನ ಬ್ರಾಹ್ಮಣರಿಗೆ ಕಲಿಸಿದವರು ಕ್ಷತ್ರಿಯರು. ದೇವರ ಅವತಾರ ತಾಳಿದರೆ ಕ್ಷತ್ರಿಯನಾಗಿ ಭೂ ಲೋಕಕ್ಕೆ ಬರುತ್ತಿದ್ದರು. ಹಾಗಾದರೆ ಪರಶುರಾಮ ಬ್ರಾಹ್ಮಣನಲ್ವೇ? ಇನ್ನೂ ವರಾಹಾವತಾರ, ಮತ್ಸ್ಯಾವತಾರ, ಇವೆಲ್ಲಾ ಕ್ಷತ್ರಿಯವೇ? ಅಂದರೆ ಇಲ್ಲಿ ಕ್ಷತ್ರಿಯರು ಬ್ರಾಹ್ಮಣರಿಗಿಂತ ಮೇಲು ಎಂದು ತಿಳಿಸುವುದಾಗಿತ್ತು. ಮೂಲದಲ್ಲಿ ಕ್ಷತ್ರಿಯರು ಎಂದು ಯಾರು ಇರಲಿಲ್ಲ. ರಾಜ್ಯ ಆಳುತ್ತಿರುವವರನ್ನು ಕ್ಷತ್ರಿಯರು ಎಂದು ಕರೆದರು. ಬ್ರಾಹ್ಮಣರು ಧೈರ್ಯದಿಂದ ಆಳ್ವಿಕೆ ಮಾಡುತ್ತಿರುವವನು ರಾಜ, ವೇದದಲ್ಲಿಯು ಸಹ ಹೇಳಿರುವುದು ತಾನೆ ಏನು? ತೋಳಿರೋನೇ ರಾಜ. ರಾಜ್ಯ ಆಳುವವನು ರಾಜ. ಅವನೇ ಕ್ಷತ್ರಿಯ ಅಂತ ಅಲ್ವಾ? ಎನ್ನುತ್ತಾರೆ. ಪಟೇಲರು ಅಸೆಂಬ್ಲಿಯ

ಮೆಂಬರಾದರೂ ಬ್ರಾಹ್ಮಣರಾದ ಅದರಲ್ಲೂ ಸದಾ ದೇವಸ್ಥಾನದ ಅರ್ಚಕರಾದ ವೆಂಕಟರಮಣಯ್ಯನವರ ಹತ್ತಿರವು ಸಹ ಕುಳಿತುಕೊಳ್ಳುತ್ತಿರಲಿಲ್ಲ. ಅಷ್ಟು ಕೀಳಾಗಿ ಹರಿಜನರನ್ನು ಅಂದಿನ ಸಮಾಜದಲ್ಲಿ ನೋಡುತ್ತಿದ್ದರು. ಹೋಟೇಲ್‌ಗಳಲ್ಲಿಯೂ ಸಹ ಇವರ ಪ್ರವೇಶವನ್ನು ನಿಷೇಧಿಸಲಾಗಿದೆ. ಜಾತಿ, ಮತಗಳು ಸುಳ್ಳೇ? ಎಂಬ ಜಿಜ್ಞಾಸೆಯು ಹಿಂದಿನಿಂದಲೂ ಬಂದಂತಹ ಪದ್ಧತಿಯಾಗಿತ್ತು. ಬ್ರಾಹ್ಮಣರು ಸಂಸ್ಕೃತ ಮತ್ತು ಉಪನಿಷತ್ತುಗಳನ್ನು ಅಭ್ಯಾಸ ಮಾಡಿದವರು. ಬೆಟ್ಟಯ್ಯನವರು ನಮ್ಮೂರ ಹೋಟೆಲ್ಗಳಿಗೆ ಬರುವುದಿಲ್ಲ, ಬೇರೆ ಕಡೆಗಳಲ್ಲೆಲ್ಲ ಹೋಟೆಲ್ಗಳಿಗೆ ಮತ್ತು ದೇವಸ್ಥಾನಗಳಿಗೆ ಹೋಗುವುದನ್ನು ನೋಡಿದರು. ತಕ್ಷಣ ಯೋಚನೆಯಲ್ಲಿ ವೆಂಕಟರಮಣಯ್ಯನವರು ತಲ್ಲೀನನಾಗಿಬಿಟ್ಟರು. ವೆಂಕಟರಮಣಯ್ಯನವರು ಹರಿಜನರಿಂದ ಮುಟ್ಟಿಸಿಕೊಂಡರೆ ಎಲ್ಲಿ ಮೈಲಿಗೆಯಾಗುತ್ತದೆಯೋ ಎನ್ನುವ ಕೆಟ್ಟ ಭಾವನೆಯನ್ನು ಉಳ್ಳವನಾಗಿದ್ದನು. ಸತ್ಯಭಾಮಳು ಸಹ ನನಗೆ ಜಾತಿ ಮತದಲ್ಲಿ ನಂಬಿಕೆಯಿರುವುದಿಲ್ಲ. ಆದರೂ ಶ್ರೀನಿವಾಸನನ್ನು ಮದುವೆಯಾದರೆ ತಪ್ಪಿಲ್ಲ ಹಾಗಾದರೆ ಜಾತಿ ಮತ ಸುಳ್ಳೇ? ಧರ್ಮ ಸುಳ್ಳೇ? ಧರ್ಮವನ್ನು ಸುಳ್ಳು ಎಂದು ಸಹ ಯಾರು ಎನ್ನುವುದಕ್ಕೆ ಆಗುವುದಿಲ್ಲ. ಆದರೆ ಜಾತಿ, ಮತ, ಅಧರ್ಮ ಅದನ್ನು ಸುಳ್ಳು ಎನ್ನಬಹುದು. ಶೂದ್ರನಾದ ಶ್ರೀನಿವಾಸ ಹೆಸರನ್ನು ಬದಲಾಯಿಸಿಕೊಂಡರೆ ಬ್ರಾಹ್ಮಣನಾಗುತ್ತಾನೆಯೇ? ಇಲ್ಲ. ಅದು ಸುಳ್ಳು ಸಮಾಜವು ಸಹ ಒಪ್ಪುವುದಿಲ್ಲ. ಜಾತಿಗಳು, ವರ್ಗಗಳು ಇವುಗಳನ್ನೆಲ್ಲಾ ನಾವುಗಳು ಸಮಾಜದಲ್ಲಿ ಸೃಷ್ಠಿಯನ್ನು ಮಾಡಿಕೊಂಡಿರುತ್ತೇವೆ ಎಂದು ಅನುಭವ ಉಳ್ಳವರು ಮಾತನಾಡುತ್ತಿದ್ದರು.

ಕಾದಂಬರಿಯಲ್ಲಿ ಬರುವ ಸತ್ಯಭಾಮಳು ಯಾರ ಮಾತನ್ನು ಕೇಳುವುದಿಲ್ಲ. ನಾನು ಓದಿ ಸ್ವತಃ ವಿಷಯವನ್ನು ತಿಳಿದುಕೊಂಡಿರುವುದರಿಂದ ಯೋಚನೆಯನ್ನು ಮಾಡುತ್ತೇನೆ. ನನ್ನ ಅನುಭವಕ್ಕೆ ಬಂದಿರುವ ಹಾಗೆಯೇ ಅನುಸರಿಸುತ್ತೇನೆ, ಎಂದಾಗ ನಿನ್ನ ಜಾತಿ ಯಾವುದು? ಎಂದು ಕೇಳಿದರು. ಹೆಂಗಸು ಜಾತಿ. ಅವನದು ಗಂಡಸು ಜಾತಿ. ಅಷ್ಟೇ ಅದರಲ್ಲಿ ಯಾವುದೇ ವ್ಯತ್ಯಾಸವಿಲ್ಲ ಎಂದಳು. ಆಗ ಅವರು ಹುಟ್ಟಿದ ಮನೆ, ಸಾಕಿ ಸಲಹಿದ ಅಪ್ಪನ ಮರ್ಯಾದೆಯನ್ನು ಬೀದಿಪಾಲು ಮಾಡುತ್ತಿದ್ದಳು. ನಿಮಗೆ ನನ್ನಿಂದ ಸಮಾಜದಲ್ಲಿ ಅಪಮಾನವಾದರೆ ನಾನು ಊರಿಗೆ ಬರುವುದಿಲ್ಲ. ಆಕಸ್ಮಾತಾಗಿ ಬಂದರೂ ಸಹ ಅಡುಗೆ ಮನೆ ಹಾಗೂ ದೇವರ ಮನೆಗೆ ಸೇರಿಸಬೇಡಿ. ಬಂಧು ಬಳಗದವರು, ನೆಂಟರುಗಳು, ಊರಿನ ಇತರ ಸ್ನೇಹಿತರು ಸಹ ಬಹಿಷ್ಕಾರ ಹಾಕುವುದು ಬೇಡ, ಹಿಂದಿನಿಂದ ಬಂದಿರುವ ದೇವಸ್ಥಾನದ ಪೂಜೆ ಮತ್ತು ಜಮೀನು ತಪ್ಪಿ ಹೋಗುವುದು ಬೇಡ. ವರ್ಷಕ್ಕೊಂದು ಸಲ ಬೆಂಗಳೂರಿಗೆ ಬಂದಾಗ ನಿಮ್ಮ ಕಾಲನ್ನು ಸಹ ಮುಟ್ಟದೆ, ಮೈಲಿಗೆ ಮಾಡದೆ ಹಾಗೆಯೇ ನೆಲಕ್ಕೆ ನಮಸ್ಕಾರ ಮಾಡುತ್ತೇನೆ. ಆಗ ನೀವು ನಮಗೆ ಆಶೀರ್ವಾದ ಮಾಡಿ ಎಂದಳು. ಜಾತಿ, ಮತ ಎಂದು ದೇವರು ಮಾಡಿಲ್ಲ, ನಾವುಗಳೇ

ಮಾಡಿರುವುದು. ಬ್ರಾಹ್ಮಣ ಮತ್ತು ಶೂದ್ರ ಎಂದು ಬ್ರಾಹ್ಮಣರು ಮಾಡಿದರು. ಜಾತಿಗೀತಿ ಎಂದು ಇವತ್ತು ಸಹ ಹಳ್ಳಿಗಳಲ್ಲಿ ಹೆಚ್ಚಾಗಿ ಮನೆ ಮಾತಾಗಿರುವುದನ್ನು ಕಾಣಬಹುದು.

ಸಮಾಜದಲ್ಲಿ ಒಬ್ಬರಿಗೊಬ್ಬರು ನಿಯತ್ತಿನಿಂದಿರೋದೆ ಧರ್ಮ ಮತ್ತು ಒಬ್ಬರಿಗೊಬ್ಬರು ಸಹಾಯ ಮಾಡುತ್ತಿದ್ದರೆ ಅದು ಸಂಸಾರ ಸುಗಮವಾಗಿರುತ್ತದೆ. ಜಾತಿಯು ಸಮಾಜವನ್ನು ಹಾಳು ಮಾಡುತ್ತದೆ. ಬ್ರಾಹ್ಮಣರು ಇರುವ ತನಕ ಜಾತೀಯತೆ ಸಮಾಜದಿಂದ ದೂರ ಹೋಗುವುದಿಲ್ಲ. ಹಿಂದೆ ಕ್ಷತ್ರಿಯರ ಕನ್ಯೇನ ಬ್ರಾಹ್ಮಣರಿಗೆ ಕೊಟ್ಟಿರುವುದು ಇದೆ. ಆದರೆ ಬ್ರಾಹ್ಮಣ ಕನ್ಯೇನ ಕ್ಷತ್ರಿಯರು ಮದುವೆಯನ್ನು ಮಾಡಿರುವುದಿಲ್ಲ. ಅವರು ಯಾವಾಗಲೂ ಭಿಕ್ಷೆಯನ್ನು ಬೇಡಿದಾಗ ನಾವು ಪದಾರ್ಥಗಳನ್ನು ಅವರಿಗೆ ಕೊಡುತ್ತೇವೆ. ಆದ್ದರಿಂದಲೇ ನಾವೇ ಮೇಲು ಎನ್ನುತ್ತಾರೆ. ವೇದ, ಉಪನಿಷತ್ತು, ಶಾಸ್ತ್ರ, ಪುರಾಣಗಳನ್ನು ಪಠನ ಮಾಡುವುದು ಬ್ರಾಹ್ಮಣರ ಕರ್ತವ್ಯವಾದರೆ, ದುಡಿಯುವುದು ಶೂದ್ರರ ಕರ್ಮವಾಗಿದೆ. ಮೇಲಗಿರಿ ಗೌಡರ ಪತ್ನಿಯಾದ ರಂಗಮ್ಮ ಮಗನಿಗೆ ಒಳ್ಳೆಯ ಬುದ್ಧಿಯನ್ನು ಕೊಡು. ನಮ್ಮದೆ ಗೌಡರುಗಳ ಜಾತಿಯಲ್ಲಿ ಹೆಣ್ಣನ್ನು ತಂದು ವಿವಾಹವಾದರೆ ನಿನ್ನ ಗುಡೀಗೆ ಹೊಸ ಗೋಡೆಯನ್ನು ಕಟ್ಟಿಸುತ್ತೇನೆ ಎಂದು ಹರಕೆಯನ್ನು ಹೊತ್ತಳು. ಶಾಸ್ತ್ರ ಸಂಪ್ರದಾಯದ ಮೂಲಕ ಮದುವೆಯನ್ನು ಮಾಡಿಕೊಳ್ಳೋಣ ಎಂದಿದ್ದಳು. ಆದರೂ ಸಹ ಸಬ್ ರಿಜಿಸ್ಟ್ರಾರ್ ಕಛೇರಿಯಲ್ಲಿ ಮದುವೆಯನ್ನು ಮಾಡಿಕೊಳ್ಳುವುದು ಎಂದು ತೀರ್ಮಾನಿಸಿದರು. ಅಲ್ಲಿಗೂ ಸಹ ಮೇಲಿನ ಅಧಿಕಾರಿಗಳಿಂದ ಆಕ್ಷೇಪ ಬಂದಿರುವುದರಿಂದ ಆಗುವುದಿಲ್ಲ ಎಂದು ಹೇಳಿದರು. ಆಗ ಇವರಿಬ್ಬರ ಮನಸ್ಸಿಗೆ ತುಂಬಾ ನೋವನ್ನು ಉಂಟು ಮಾಡಿತು. ನಾನು ಯಜಮಾಂತಿಯೆಂದು ಎಂದು ತಿಳಿದುಕೊಂಡಿದ್ದೆ. ಆದರೆ ಯಜಮಾನರದು ಸಹ ಮದುವೆಗೆ ವಿರೋಧವನ್ನು ಮಾಡುತ್ತಿದ್ದಾರೆ ಎಂಬುದು ನೆನಪಿಗೆ ಬಂದಿತ್ತು.

ರಂಗಮ್ಮ ಮಗನಿಗೆ ದೇವಸ್ಥಾನಕ್ಕೆ ಹೋಗಿ ಬರಾನ ಬಾ ಎಂದರು. ಅವನು ಬರುವುದಿಲ್ಲ ಎಂದು ನುಡಿದನು. ದೇವಸ್ಥಾನದ ಗೋಪುರದ ಕಳಸಕ್ಕೆ ಚಿನ್ನದ ತಗಡನ್ನು ಹೊಡೆಸುತ್ತೇನೆ ಎಂದು ಹರಕೆಯನ್ನು ಮಾಡಿದಾಗ ನೀನು ಹುಟ್ಟಿದೆ. ಈಗ ದೇವರೆ ಇಲ್ಲಾ ಅಂತೀಯಾ? ನಾಳೀಕೆ ನಿನ್ನ ಹುಟ್ಟಿಸಿದ ಅಪ್ಪನನ್ನೇ ಇಲ್ಲಾ ಅಂತೀಯಾ? ಎಂಬ ಮಾತುಗಳಿಂದ ಬೈದಳು. ತಾಯಿ ಮಗನು ತಿರುಮಲ ದೇವಸ್ಥಾನಕ್ಕೆ ಮಹಾ ಮಂಗಳಾರತಿ ಮಾಡಿಸುವುದಕ್ಕೆ ದೇವಸ್ಥಾನಕ್ಕೆ ಬಂದಾಗ ಪೂಜೆ ನಡೆಯುತ್ತಿತ್ತು. ಆಗ ರಂಗಮ್ಮನು ನಮ್ಮ ಹಣ್ಣು ಕಾಯಿಗಳನ್ನು ಮಾಡಿ ಎಂದಳು. ಆಗ ಶ್ರೀನಿವಾಸನ ಹತ್ತಿರ ಮಂಗಳಾರತಿ ನಿಂತಲ್ಲಿಯೇ ಇತ್ತು. ಒಂದೆರೆಡು ನಿಮಿಷ ಸಣ್ಣಗೆ ಮೈ ಬೆವೆತಾಗ ಸ್ವಲ್ಪ ತಲೆ ಸುತ್ತಿದಂತಾಗಿ ಕೆಳಗೆ ಬೀಳುವ ಭಯವಾಗಿ ಹಾಗೇಯೆ ಬಾಗಿಲನ್ನು ಹೊರಗಿಸಿಕೊಂಡನು. ಮತ್ತೆ ತಲೆ ಎತ್ತಿ ವಿಗ್ರಹವನ್ನು ನೋಡಲಾಗಲಿಲ್ಲ.

ಪೂಜಾರಿಗಳು ಮಂಗಳಾರತಿಯನ್ನು ಕೊಟ್ಟರು. ನಂತರ ಬೆಳ್ಳಿಯ ತೀರ್ಥ ಪಾತ್ರೆಯನ್ನು ಹಿಡಿದು ತಂದು ರಂಗಮ್ಮನಿಗೆ ತೀರ್ಥ ಕೊಟ್ಟರು. ಅವರೆದುರು ಇದ್ದರೂ ಸಹ ಅಲಕ್ಷಿಸಿದಂತೆ ಒಳಗೆ ಹೊರಟು ಹೋದರು.

ರಂಗಮ್ಮನವರು ಅಯ್ನೋರೇ ಅದು ಹುಡುಗ ಬುದ್ಧಿ ತಪ್ಪು ಯೋಚನೆಯನ್ನು ಮಾಡಿದೆ. ನೀವು ಕೋಪ ಮಾಡಿಕೋಬೇಡಿ. ಅದಕ್ಕೂ ಸಹ ತೀರ್ಥವನ್ನು ಕೊಡಿ ಎಂದಳು. ದೇವರ ಮುಂದಲ್ಲ ನಿನ್ನ ಜಂಬ ಕೈ ನೀಡಿ ಎಂದು ತಾಯಿ ಕೋಪಿಸಿದಾಗ ತೀರ್ಥವನ್ನು ಕುಡಿದನು. ಸತ್ಯಭಾಮಳು ತನ್ನ ಹತ್ತಿರ ಶ್ರೀನಿವಾಸ ಬರುತ್ತಾನೆ ಎಂದು ಆಸೆ ಪಟ್ಟಿದಳು ಸಹ ಅವನ ಸುಳಿವು ಸಿಕ್ಕುತ್ತಿರಲಿಲ್ಲ. ತನ್ನ ಮನಸ್ಸನ್ನು ಗಟ್ಟಿಮಾಡಿಕೊಂಡು ತನಗೆ ತಾನೇ ಸಮಾಧಾನ ಹೇಳಿಕೊಂಡಳು. ತರಗತಿಯಿಂದ ಪಾಠವನ್ನು ಮುಗಿಸಿಕೊಂಡು ಬಂದಳು. ಜವಾನ ಹತ್ತಿರ ಬಂದು ದೇಶಿ ಕಾಲೇಜಿನ ಪ್ರಿನ್ಸಿಪಾಲರಾದ ರಾಜರಾಯರು ಕರೆಯುತ್ತಿದ್ದಾರೆ ಎಂದಾಗ ಅವರ ರೂಮಿಗೆ ಹೋದಳು. ಸೌಜನ್ಯದಿಂದ ಕೆಳಗಡೆ ಕುಳಿತುಕೊಳ್ಳಿ ಎಂದರು. ಆಗ ಅವರು ತರಗತಿಯಲ್ಲಿ ಪಾಠ ಪ್ರವಚನಗಳು ಚೆನ್ನಾಗಿ ನಡೆಯುತ್ತಿದೆಯಾ ಎಂದು ವಿಚಾರಿಸಿದರು. ಮತ್ತೆ ಸತ್ಯಭಾಮಳ ವೈಯಕ್ತಿಕ ವಿಚಾರಕ್ಕೆ ಬಂದರು. ಶೂದ್ರ ಶ್ರೀನಿವಾಸನ ಮದುವೆಯ ವಿಚಾರವನ್ನು ತೆಗೆದುಕೊಂಡರು. ಇವರಿಗೆ ಯಾರು ತಿಳಿಸಿದರೂ ಎಂಬ ಅನುಮಾನ ಬಂದಾಗ ಮಂತ್ರಿಗಳೇ ಹೇಳಿರಬಹುದು ಎಂದುಕೊಂಡಳು. ಆದರೆ ಅವರು ಕೆಲಸದಿಂದ ತೆಗೆಯಬಹುದು, ಅದಕ್ಕಿಂತ ಇನ್ನೇನು ಮಾಡಿಯಾರು? ಎಂದು ಮನಸ್ಸಿನಲ್ಲಿ ದೃಢ ಸಂಕಲ್ಪವನ್ನು ಮಾಡಿಕೊಂಡಳು. ಕಾಲೇಜಿನಲ್ಲಿಯೂ ಸಹ ಜಾತೀಯತೆಯನ್ನು ಮಾಡುತ್ತಾರೆ ಎಂದರು. ಅಧ್ಯಾಪಕಿ ವೃತ್ತಿಗೆ ಏಕೆ ಬಂದಿರಾ? ಬೇರೆ ವೃತ್ತಿಯನ್ನು ಕಂಡುಕೊಳ್ಳಬಹುದಾಯಿತ್ತಲ್ಲ ಎಂದರು. ಆಗ ಸತ್ಯಭಾಮಳ ಮನಸ್ಸಿಗೆ ನಾಟಿತು. ಆದರೆ ನೀನು ಶೂದ್ರನನ್ನು ಮದುವೆಯಾಗುವುದರಿಂದ ಸಮಾಜಕ್ಕೆ ಕೆಟ್ಟ ಹೆಸರು ಬರುತ್ತದೆ. ಶೂದ್ರಳಾದ ಹೊನ್ನಮ್ಮ ಮನೆಯಲ್ಲಿ ಮಾಡಿದ ತಿಂಡಿ ತಿನಿಸುಗಳನ್ನು ಮುಚ್ಚಿಟ್ಟುಕೊಂಡು ಬಂದು ಸತ್ಯಭಾಮಳಿಗೆ ಕೊಡುತ್ತಿದ್ದಳು. ಆದರೆ ಅವಳು ತಿಂದು ಮುಗಿಸುತ್ತಿದ್ದಳು. ಒಂದು ದಿನ ಬ್ರಾಹ್ಮಣರ ಹುಡುಗಿಯರಿಗೆ ಗೊತ್ತಾಗಿ ಅವರ ತಂದೆಗೆ ವಿಷಯವನ್ನು ತಿಳಿಸಿದಾಗ ಹೊಡೆಯುವುದಕ್ಕೆ ಹೋದರು. ತಾಯಿ ಸತ್ತ ಹುಡುಗಿ ನನ್ನ ಮರ್ಯಾದೆಯನ್ನು ಕಳೆಯುವುದಕ್ಕೆ ಹುಟ್ಟಿಬಿಟ್ಟಿದೆ ಎಂದಿದ್ದರು. ಹೊನ್ನಮ್ಮ ಅಪಮಾನದಿಂದ ಸ್ನೇಹವನ್ನು ಬಿಟ್ಟು, ಪ್ರೀತಿಯಿಂದಿದ್ದ ಇಬ್ಬರೂ ಮಾತನಾಡುವುದನ್ನು ನಿಲ್ಲಿಸಿದರು. ಒಂದೇ ಬಾವಿಯಲ್ಲಿ ನೀರು ಕುಡಿಯುವಾಗ ಅದು ಅವರು ಬೇಯಿಸಿದ ಮಾತ್ರಕ್ಕೆ ಮೈಲಿಗೆಯಾಗುತ್ತದೆಯೇ? ಎಂಬ ಪ್ರಶ್ನೆಯನ್ನು ಹಾಕಿದಳು.

ದೇವರ ಹೆಸರುಗಳನ್ನು ಮಾನವರು ನಾಮಕರಣ ಮಾಡಿಕೊಳ್ಳುವುದರಿಂದಲೂ ಮತ್ತು ಹೋಟೆಲ್‌ಗಳಿಗೆ ಹೆಸರುಗಳನ್ನು ಇಡುವುದರಿಂದಲೂ ಸಹ ಜಾತಿಯನ್ನು ಸೂಚಿಸುವ ಪದಗಳಿರುತ್ತವೆ.

ಆದರೂ ಶೂದ್ರನಾದ ಶ್ರೀನಿವಾಸನನ್ನು ಬ್ರಾಹ್ಮಣ ಕನ್ಯೆಯಾದ ಸತ್ಯಭಾಮಳನ್ನು ಮದುವೆಯಾಗುತ್ತಾರೆಂದು ತಿಳಿದು, ಕಾಲೇಜಿಗೆ ಒಳ್ಳೆಯ ಹೆಸರು ಬರುವುದಿಲ್ಲವೆಂದು ಕಾಲೇಜಿನ ಕಮಿಟಿಯವರು ಸತ್ಯಭಾಮಳನ್ನು ತೆಗೆಯುವ ಕೆಲಸದಲ್ಲಿದ್ದಾರೆ. ಆದರೆ ಕಷ್ಟದ ಪರಿಸ್ಥಿತಿಯಲ್ಲಿ ಮನುಷ್ಯನ ವಿಶ್ವಾಸದ ಆಳ ಗೊತ್ತಾಗುವುದು ಎಂದರು. ಆದರೂ ಸತ್ಯಭಾಮಳು ಕಾಲೇಜಿಗೆ ಬಂದರೂ ಸಹ ತರಗತಿಗಳಲ್ಲಿ ಪಾಠಗಳನ್ನು ತಪ್ಪದೇ ಮಾಡುತ್ತಿದ್ದಳು. ಆದರೂ ಸಹ ಸರಿಯಾಗಿ ತರಗತಿಗಳನ್ನು ತಾಳದೇ ಸರಿಯಾದ ಕಾರಣಗಳನ್ನು ಕೊಟ್ಟಿಲ್ಲದಿದ್ದರಿಂದ "ನಿಮ್ಮ ಸೇವೆಯನ್ನು ಈ ದಿನದಿಂದ ರದ್ದು ಪಡಿಸಲಾಗಿದೆ"[೪] ಎಂದು ಕಾಗದದಲ್ಲಿ ಬರೆದು ಜವಾನನ ಹತ್ತಿರ ಕೊಟ್ಟರು. ಅವನು ಬಂದು ಸತ್ಯಾಭಾಮಳ ಕೈಗೆ ಕೊಟ್ಟರು. ಓದಿ ಅರ್ಥಮಾಡಿಕೊಂಡು ಅಸಮಾಧಾನಗೊಂಡಳು. ಅಂದರೆ ಕಾಲೇಜಿನಲ್ಲಿ ಬ್ರಾಹ್ಮಣರ ಹುಡುಗಿಯರು ಶೂದ್ರನ ಮದುವೆಯಾಗುವ ಕಾರಣದಿಂದ ಕೆಲಸದಿಂದ ತೆಗೆಯುವ ನಿರ್ಧಾರವಾಗಿದೆ. ಆದರೂ ಹೆಂಗಸರು ಸಹ ಶೂದ್ರರಿಗೆ ಸರಿ ಸಮಾನರು. ಆದರೆ ನಾನು ಓದಿದ್ದರಿಂದಲೇ ಇಂತಹ ಅನಾಹುತಗಳಿಗೆ ಕಾರಣನಾಗಿದ್ದೇನೆ ಎಂದುಕೊಂಡಳು.

ಹರಿಜನ ಪಂಗಡಕ್ಕೆ ಸೇರಿದ ಬೆಟ್ಟಯ್ಯನವರು, ದೊಡ್ಡ ಮೀಸೆ ಬೆಳೆಸಿದ ಮೇಲೆ ತಿರುಗಿಸಿ ನೀವಿಕೊಳ್ಳುವುದು, ಊರನ್ನೇ ಆಳುವ ಪಟೇಲ ಮನೆತನದ ಗುರುತು ಎಂದಿದ್ದರು. ಈ ವಿಷಯ ತಿಳಿದ ಪಟೇಲರು ಬೆಟ್ಟಯ್ಯನವರನ್ನು ಕರೆಸಿ, ಕಂಬಕ್ಕೆ ಕಟ್ಟಿ ಹೊಡೆಸಿದರು. ಆಮೇಲೆ ಸಂಜೆಯ ಒಳಗಡೆ ತೆಗಸದೇ ಇದ್ದರೆ ನಾಳೀಕೆ ಕ್ವಾಟೀ ಬಾಗ್ಲಮುಂದೆ ಕುಂಡ್ರಿಸಿಕೊಂಡು ನನ್ನ ಉಚ್ಚೇಲಿ ನಿನ್ನ ಮೀಸೆ ಬೋಳಸ್ತೀನಿ ನನ್ಮಗನೆ' ಎಂದು ಹೇಳಿದರು. ಕಟ್ಟಿಸಿದ್ದನ್ನು ಬಿಚ್ಚಿಸಿ ಕಳಿಸಿದರು. ಬೆಟ್ಟಯ್ಯನವರಿಗೆ ಅಪಮಾನವಾದಂತಾಗಿ ಎಲ್ಲಿಗೆ ಹೋದರೆಂದು ಯಾರಿಗೂ ಗೊತ್ತಾಗಲಿಲ್ಲ. ತಾಲ್ಲೂಕಿಗೆ ಪ್ರಸಿದ್ಧ ದೇವಸ್ಥಾನ ಪ್ರವೇಶಕ್ಕೆ ಹರಿಜನ, ಮಾದಿಗರಿಗೂ ಸಹ ಸಮಾನ ಅವಕಾಶ ಸಿಗಬೇಕು. ಸರಕಾರದಿಂದಲೇ ತೀರ್ಮಾನವಾಗಿರುವುದರಿಂದ ಪ್ರತಿಯೊಬ್ಬ ಜನರು, ಪ್ರಮುಖ ಮುಖಂಡರುಗಳು ಅವರಿಗೆ ಅವಕಾಶ ಮಾಡಿಕೊಡಬೇಕೆಂದು ದಿನಪತ್ರಿಕೆಗಳಲ್ಲಿ ವರದಿಯಾಗಿತ್ತು. ಇದನ್ನು ನೋಡಿದ ಮಂತ್ರಿಮೇಲಗಿರಿಗೌಡರು ಸಹ ನಾನು ಅವರನ್ನು ಪ್ರವೇಶ ಮಾಡಿಸುತ್ತೇನೆ. ಮುಖ್ಯಮಂತ್ರಿಗಳಿಗೆ ಮಾತನ್ನು ಕೊಟ್ಟು ಊರಿಗೆ ಬಂದಿದ್ದಾರೆ. "ನಮ್ಮ ಗೌಡಿಕಿ ಮರ್ಯಾದೆಯನ್ನು ಹಾಳು ಮಾಡ್ದೇ ನನ್ಮಗನೆ"[೫] ಎಂದು ದೊಡ್ಡ ಯಜಮಾನರು ಮಗನನ್ನು ದಾಕ್ಷಿಣ್ಯವಿಲ್ಲದೇ ಖಂಡಿಸಿದರು. ಅವರಿಗೆ ಉತ್ತರ ಕೊಡಲು ತಿಳಿಯದಿದ್ದಾಗ ಗಾಂಧಿ ಮಹಾತ್ಮರ ಆಶ್ರಮದಲ್ಲಿ ಬಂದು ಬಾಯಿ ತೆರೆದರು. ಯಾರೋ ಜಾತಿ ಬಿಟ್ಟು ಅಂತಾ ನೀನ್ ಬಿಡ್ತಿ ಏನ್ ಲಾ? ಎಂದು ಅವರು ಉರಿದೆದ್ದರು. ಈ ಪ್ರವೇಶದ ವಿಷಯದಲ್ಲಿ ಅಪ್ಪ ಮಗನು ಜಗಳವಾಡುತ್ತಾರೆ ಎಂದು ಊರಿನ ಜನರು ಕನಸ್ಸನ್ನು ಕಂಡಿರುತ್ತಾರೆ. ಊರಿನ ಮುಖಂಡರುಗಳ ಹತ್ತಿರ ಮಾತನಾಡಿ

ಪ್ರವೇಶಕ್ಕೆ ಅನುಮತಿ ಸಿಕ್ಕಿತು. ಹರಿಜನರ ಪ್ರತಿನಿಧಿಯಾದ ಬೆಟ್ಟಯ್ಯನವರು ಅವರ ಜನಕ್ಕೆ ಚೆನ್ನಾಗಿ ಮೈ ಕೈಗಳನ್ನು ತೊಳೆದುಕೊಂಡು ಶುಚಿಯಾಗಿ ಬರಬೇಕೆಂದು ಅಪ್ಪಣೆ ಮಾಡಿದರು. ಅದೇ ರೀತಿಯಲ್ಲಿ ಎಲ್ಲರೂ ಸಹ ಬೆಟ್ಟಯ್ಯನವರ ಮುಂದಾಳತ್ವದಲ್ಲಿ ಸಾಲು ಸಾಲಾಗಿ ಸ್ವಾಮಿಯ ದರ್ಶನವನ್ನು ಮಾಡಿದರು. ತೀರ್ಥ ಪ್ರಸಾದವನ್ನು ಸ್ವೀಕರಿಸಿದರು. ಆದ ಮೇಲೆ ದೇವಸ್ಥಾನ ಮೈಲಿಗೆಯಾಗಿದೆಯೆಂದು ಎಲ್ಲರೂ ಒಟ್ಟುಗೂಡಿ ದೇವಸ್ಥಾನಕ್ಕೆ ಪುಣ್ಯವಾಚನೆ ಮಾಡಿದರು. ಮಾವಿನ ಸೊಪ್ಪಿನಿಂದ ಶುದ್ಧ ಜಲವನ್ನು ಎಲ್ಲಾ ಕಡೆಗೂ ಹಾಕಿದರು. ಅಲ್ಲಿದ್ದವರೆಲ್ಲ ಪಂಚಗವ್ಯ ತೆಗೆದುಕೊಂಡ ಮೇಲೆ ದೇವರಿಗೆ ಪಂಚಾಮೃತ ಅಭಿಷೇಕ, ರಸಾಯನ ನೈವೇದ್ಯ ಮಾಡಿ ಮಂಗಳಾರತಿ ಪ್ರಸಾದವನ್ನು ತೆಗೆದುಕೊಂಡರು. ಎಲ್ಲರೂ ಸಹ ಊರಿಗೆ ಬಂದರು. ಬೆಳಿಗ್ಗೆ ಪತ್ರಿಕೆಗಳಲ್ಲಿ ಎಲ್ಲರಿಗೂ ಪ್ರವೇಶಕ್ಕೆ ಅವಕಾಶ ಮಾಡಿಕೊಟ್ಟಿದ್ದಾರೆ, ಈಗ ಗ್ರಾಮಗಳು ಅಧುನಿಕವಾಗುತ್ತಿವೆ ಎಂದು ದಿನಪತ್ರಿಕೆಗಳಲ್ಲಿ ಪ್ರಕಟಿಸಲಾಗಿತ್ತು. ಬ್ರಾಹ್ಮಣನಾದ ವೆಂಕಟರಮಣಯ್ಯನವರು ತಾವು ಕಲಿತಿದ್ದ ಸಂಸ್ಕೃತ, ವೇದಾಂತ, ಮಂತ್ರ ಮತ್ತು ಚತುರ್ವರ್ಣಗಳು ಹುಟ್ಟಿದ ಬಗ್ಗೆ ಹೇಳುತ್ತಿದ್ದರು.

**"ಬ್ರಾಹ್ಮಣೋऽಸ್ಯ ಮುಖಮಾಸೀತ್ ಬಾಹೂ ರಾಜನ್ಯಃ ಕೃತಃ**

**ಊರೂ ತದಸ್ಯ ಯದ್ವೈಶ್ಯಃ ಪದ್ಭ್ಯಾಂ ಶೂದ್ರೋ ಅಜಾಯತ್"**[೬]

ಅಂದರೆ ಬ್ರಾಹ್ಮಣರು ಬಾಯಿಯಿಂದಲೂ, ಕ್ಷತ್ರೀಯರು ತೋಳುಗಳಿಂದಲೂ, ವೈಶ್ಯರು ತೊಡೆಯಿಂದಲೂ, ಶೂದ್ರರು ಪಾದಗಳಿಂದಲೂ ಹುಟ್ಟಿದರು ಎಂಬ ಅರ್ಥ ಹೇಳಿದ ನಂತರ ಸತ್ಯಭಾಮಳು ಪ್ರಶ್ನೆ ಮಾಡಿ ಕೇಳಿದಳು. ಹಾಗಾದರೆ ಮುಸ್ಲಿಂರು ಮತ್ತು ಕ್ರೈಸ್ತರು ಎಲ್ಲಿಂದ ಹುಟ್ಟಿದರು? ಎಂದು ಕೇಳಿದಾಗ ತಂದೆಯವರು ತಬ್ಬಿಬ್ಬಾದರು. ಅಡುಗೆ ಮಾಡುವಾಗಲೂ ಸಹ ಮೂಲಂಗಿ ಹುಳಿಗೆ ಹುಣಸೆ ಹಣ್ಣಿಗಿಂತ ನಿಂಬೆಹಣ್ಣು ಹಿಂಡಿ ತಿಳಿಸಾರು ಮಾಡಿದರೆ ಏನಾಗುತ್ತದೆ? ಏಕೆ ಹಾಕಬಾರದು ಎಂದು ತಂದೆಯನ್ನು ಪ್ರಶ್ನಿಸಿದಳು. ಸತ್ತಿಗ ಬಂದು ಯಜಮಾನರೇ, ಹಾರುವ ಹೆಣ್ಣು ಮಾರಮ್ಮನಾಗುತ್ತಾಳೆ ಎಂದು ಹೇಳಿದನು. ಬ್ರಾಹ್ಮಣ ರೂಪವನ್ನೇ ಹೋಲುವ ಒಬ್ಬ ಮಾದಿಗ ಹುಡುಗ ತುಂಬಾ ಬುದ್ಧಿವಂತನಾಗಿದ್ದನು. ಜೀವನವನ್ನು ಕಾಪಾಡಿಕೊಳ್ಳುವುದಕ್ಕೋಸ್ಕರ ದೇಶ ಸಂಚಾರ ಹೊರಟಿದ್ದನು. ರಸೂರಿಪಟ್ಟಣದ ಒಬ್ಬ ಬ್ರಾಹ್ಮಣರ ಮನೆಯಲ್ಲಿ ದನ ಕಾಯುವುದಕ್ಕೆ ಸೇರಿಕೊಂಡನು.

ಮನೆಯ ಒಳಗಡೆ ಹೇಳಿಕೊಡುತ್ತಿದ್ದ ವೇದ, ಮಂತ್ರಗಳನ್ನೆಲ್ಲ ದೂರದಿಂದಲೇ ಕೇಳಿಸಿಕೊಂಡು ಕಲಿತಿದ್ದನು. ಅವರ ಆಚಾರ ವಿಚಾರಗಳನ್ನು ಸೂಕ್ಷ್ಮವಾಗಿ ನೋಡಿದನು. ಚಿಕ್ಕ ಹುಡುಗರನ್ನು ಕೇಳಿ ತಿಳಿದುಕೊಂಡನು. ಆ ಊರನ್ನು ಬಿಟ್ಟು ತುಂಬಾ ದೂರದ ಊರಿಗೆ ಬಂದು ಬ್ರಾಹ್ಮಣ ಎಂದು ಹೇಳಿಕೊಂಡನು. ಬ್ರಾಹ್ಮಣರ ಮಗಳನ್ನು ಮದುವೆಯಾಗಿ ಇತರ ಜಾತಿಯವರಿಂದ ದಾನ, ದಕ್ಷಿಣೆಗಳನ್ನು

ತೆಗೆದುಕೊಳ್ಳುತ್ತಾ ಸುಖವಾಗಿದ್ದನು. ಏಳೆಂಟು ಮಕ್ಕಳೂ ಆದವು. ಇತ್ತ ತಾಯಿ ದೇಶಾಂತರ ಹೋದ ಮಗನನ್ನು ಹುಡುಕಿಕೊಂಡು ಊರೂರು ಅಲೆದಳು. ಕೊನೆಗೆ ಈ ಊರಿಗೆ ಬಂದು ಮಗನನ್ನು ಪತ್ತೇ ಮಾಡಿದಳು. ಅವ್ವನನ್ನು ಹೊರಗೆ ಕಳಿಸಲಿಲ್ಲ. ಇಲ್ಲಿದ್ದರೆ ನನ್ನ ಜಾತಿಯು ಪತ್ತೆಯಾಗುತ್ತದೆ ಎಂದಿದ್ದನು. ನಿನಗೆ ಮಾತು ಬರುವುದಿಲ್ಲ ಮೂಗಿ ನಮ್ಮ ತಾಯಿ ಬಂದಿದ್ದಾಳೆ ನೋಡು ಎಂದನು. ಸ್ನಾನ ಮಾಡಿದ ಮೇಲೆ ಮನೆಗೆ ಬಂದಳು. ಸೊಸೆ ಹಾಲು ಬಾಳೆಹಣ್ಣು ಕೊಟ್ಟಳು. ಮೂಗಿ ಎನ್ನುವುದನ್ನು ಮರೆತು ಈಟೊಂದು ಒಳ್ಳೆ ಹಾಲಿಗೆ ಎಮ್ಮೆನ ಯಾವಾಗ ಕಟ್ಟಿದ್ದೇ ಅಮ್ಮಿ? ಎಂದುಬಿಟ್ಟಳು. ಸೊಸೆಗೆ ಅನುಮಾನ ಬಂದಿತು. ಈತ ಬ್ರಾಹ್ಮಣ ವೇಷದ ಮಾದಿಗನೆಂದು ತಿಳಿದಳು. ತಾನು ನೀಚ ಜಾತಿಯ ಗಂಡಸಿಗೆ ಕೊಡಲ್ಪಟ್ಟು ಎಂಜಲಾದ್ದರಿಂದ ಏನು ಪ್ರಾಯಶ್ಚಿತ್ತ? ಎಂದು ತಂದೆಯನ್ನು ಕೇಳಿದಳು. ಅಪ್ಪ ನಾಯಿ ಮುಟ್ಟಿದ ಮಡಿಕೆಗೆ ಏನು ಮಾಡಬೇಕು ಎಂದಾಗ, ನಾಯಿ ಕೊರಳಿಗೆ ಕಟ್ಟಬೇಕು ಇಲ್ಲವಾದರೆ ನೆಲ್ಲು ಹುಲ್ಲು ಸುತ್ತಿ ಸುಡಬೇಕು ಎಂದನು. ಅಗ್ನಿ ಎಂಥ ಮೈಲಿಗೆಯನ್ನಾದರೂ ಶುದ್ಧ ಮಾಡುತ್ತದೆ. ಹಿಂದಿರುಗಿ ಮನೆಗೆ ಬಂದಳು. ರಾತ್ರಿ ಎಲ್ಲರೂ ಮಲಗಿದ್ದಾಗ ಮನೆಯ ಸುತ್ತ ನೆಲ್ಲು ಹುಲ್ಲು ಹಾಕಿ ಹರಡಿದಳು. ಮನೆಯ ಮೇಲಕ್ಕೂ ಹುಲ್ಲಿನ ಕಂತೆಗಳನ್ನು ಎಸೆದಳು. ಸುತ್ತ ಬೆಂಕಿ ತೋರಿಸಿ ತಾನು ಮನೆಯೊಳಗಡೆ ಬಂದು ಬಿಗಿಯಾಗಿ ಅಗಳಿ ಹಾಕಿಕೊಂಡಳು ಇಡೀ ಸಂಸಾರವೇ ಸುಟ್ಟುಹೋಯಿತು. ಅವಳೇ ಮಾರಮ್ಮ. ಮಾದಿಗರ ದೇವತೆಯಾದಳು. ವಂಚಿಸಿದ ಪಾಪಕ್ಕಾಗಿ ಗಂಡನನ್ನು ಕೋಣದ ರೂಪದಲ್ಲಿ ಪ್ರತೀ ವರ್ಷ ಬಲಿಯಾಗಿ ಕೊಡುತ್ತಾರೆ. ಪಾಪಿ ಬೀಜದಿಂದ ಅವಳ ಹೊಟ್ಟೆಯಲ್ಲಿ ಹುಟ್ಟಿದ್ದ ಮಕ್ಕಳೇ ಆಡು ಕುರಿಗಳು. ಅವುಗಳನ್ನು ಅವಳಿಗೆ ಕಡಿಯುವುದನ್ನು ಕಾಣಬಹುದು. ಆದ್ದರಿಂದಲೇ ಬಿಳಿಯ ಮಾದಿಗ ಕರಿಯ ಬ್ರಾಹ್ಮಣ ಜಾತಿಯನ್ನು ಯಾವತ್ತೂ ನಂಬಬಾರದು ಎಂದಿದ್ದರು. ಮಂಡ್ಯದ ಕೆಂಪಣ್ಣಗೌಡರ ಮಗಳು ಕುಮುದಿನಿ ಇಂಟರ್ ಮಿಡಿಯಟ್ ಓದಿರುವ ಚೆಲುವಾದ ಕನ್ಯೆಯನ್ನು ಶ್ರೀನಿವಾಸನೊಂದಿಗೆ ಮದುವೆಯು ಬಹು ಅದ್ದೂರಿಯಾಗಿ ನಡೆಯಿತು.

ಬೆಟ್ಟಯ್ಯನವರ ನೇತೃತ್ವದಲ್ಲಿ ಅನ್ನಸಂತರ್ಪಣೆ ನಡೆಯುವಾಗ ಗಲಾಟೆ ಎದ್ದಿತು. ಮಾದಿಗನಾದ ಬೆಟ್ಟಯ್ಯನವರು ತಮಗಿಂತ ಅಂತಸ್ತಿನಲ್ಲಿ, ಜಾತಿಯಲ್ಲಿ ಕೀಳಾದ್ದರಿಂದ ನಾವುಗಳು ಊಟ ಮಾಡುವುದಿಲ್ಲವೆಂದು ಪಕ್ಕದ ಕೇರಿಯ ಹರಿಜನರು ಜಗಳವನ್ನು ತೆಗೆದರು. ಬೆಟ್ಟಯ್ಯನವರು ಗಾಂಧಿ ಆಶ್ರಮದಿಂದ ಬಂದಿದ್ದರಿಂದ ಎಲ್ಲರೂ ಸಮಾನ ಮನಸ್ಸನ್ನು ಹೊಂದಿದ್ದಾರೆ ಎಂದುಕೊಂಡಿದ್ದರು. ಆದರೆ ಇವರು ಎಲ್ಲಾ ರೀತಿಯಲ್ಲಿ ಅನುಕೂಲ ಮಾಡಿಕೊಟ್ಟಿರುವುದರಿಂದ ಮಾದಿಗ ಜಾತಿಯನ್ನು ಎಡಗೈ ಎಂದು ತಮ್ಮನ್ನು ಬಲಗೈ ಎಂದು ಹರಿಜನರು ಕರೆದುಕೊಳ್ಳುತ್ತಿದ್ದರು. ಆದರೂ ಹರಿಜನರ ಮುಖಂಡನಾದ ಕೋಣಿಗಯ್ಯ ಬಂದರು. ಬೆಟ್ಟಯ್ಯನವರ ಮುಖದ ಮುಂದೆಯೇ ಬಲಗೈ ಊಟ ಮಾಡುವುದಕ್ಕೆ, ಎಡಗೈ

ತಿಕ ತೊಕ್ಕನಾಕೆ ದೇವರು ಮಾಡಿದ್ದಾನೆ. ಆದ್ದರಿಂದ ಎಡಗೈ ಮುಟ್ಟಿದ್ದ ಬಲಗೈ ತಿಂತೈತೇನ್ಲೇ? ಎಂದು ಹೇಳಿ ಹೊರಟು ಹೋದನು. ಉಳಿದವರು ಅವನನ್ನು ಅನುಸರಿಸಿದರು. ಇಲ್ಲಿ ಯಾರೂ ಸಹ ಜಗಳವಾಡಬಾರದು. ಊಟ ಮಾಡದೆ ಹೋದವರಿಗೆ ಬೇರ ಅಡಿಗೆ ಸಾಮಾನು ಕಳಿಸುವಂತೆ ವ್ಯವಸ್ಥೆ ಮಾಡಿದರು.

ವೆಂಕಟರಮಣಯ್ಯನವರು ದೇವರು ಅನ್ನುವುದೇ ಸುಳ್ಳು, ಅದರ ಪೂಜೆಯು ಸಹ ಸುಳ್ಳು ಕಸುಬಾಗಿದೆ. ನಾನು ಇನ್ನ ಪೂಜೆಯನ್ನು ಮಾಡುವುದಿಲ್ಲ ಎಂದು ಮಗನಿಗೆ ಬೀಗದ ಕೀಯನ್ನು ಕೊಟ್ಟರು. ಪುರೋಹಿತ ಪೂಜಾರಿಯಂತಹ ಕಸುಬು ಸಮಾಜದಲ್ಲಿ ಮತ್ತೊಂದಿಲ್ಲ ಎಂದು ಪುರಾಣದಲ್ಲಿಯು ಸಹ ಕಂಡುಬರುತ್ತದೆ. ಶ್ರೀನಿವಾಸನು ತನ್ನ ಜಾತಿಯವಳಾದ ಕುಮುದಿನಿಯೊಂದಿಗೆ ಮದುವೆಯಾದರು. ಆಮೇಲೆ ಆತನ ಮನೆಯ ಪರಿವಾರದವರು ಕುಲ ದೇವರಾದ ಶ್ರೀನಿವಾಸನಿಗೆ ಹಣ್ಣು ಮಂಗಳಾರತಿಗಳನ್ನು ತಂದು ಪೂಜೆಯನ್ನು ಮಾಡಿಸಿದರು. ವೆಂಕಟರಮಣಯ್ಯನವರು ಸಹ ಹರಿಜನ ಕಾಲೋನಿಗೆ ಹೋದರು. ಇದರಲ್ಲಿ ಹೊಲೆಗೇರಿಯಾವುದು ಮಾದಿಗ ಕೇರಿ ಯಾವುದು? ಎಂದು ಕೇಳಿದರು. ಆಗ ಅವರು ಹುಚ್ಚು ನಾಯಿ ಕೇರಿಗೆ ಬಂದಿದೆ ಲಕ್ಷ್ಮಿಯನ್ನು ಕದಿಯುವುದಕ್ಕೆ ಮಡಗು ತೊಪ್ಪಿಯಾಗೆ ಎಂದು ಕಿರುಚಿದನು. ಮನೆಗಳ ಸಂಧಿಗೊಂದಿಗಳಿಂದ ಬಂದವರು ಸಗಣಿ ತೊಪ್ಪೆಗಳನ್ನು ಬೀಸಿ ಬೀಸಿ ಮುಖ, ಮೈಗಳಿಗೆ ಹೊಡೆದರು. ಇವರ ತಲೆ, ಮುಖ, ಬೆನ್ನು, ಭುಜ, ಕಾಲು, ಮೊಣಕಾಲುಗಳೆಲ್ಲ ಆದದ್ದು ಮಾತ್ರವಲ್ಲ ಹಸಿ ಸಗಣಿಯು ಬೀಸಿ ಬಂದು ಬಿದ್ದ ರಭಸಕ್ಕೆ ಮೈ ಕೈಗಳಿಗೆ ನೋವು ಆಯಿತು. ಅವರು ಹಿಂತಿರುಗಿ ಹೊರಟರು. ಆದರೆ ಬೆನ್ನಿನ ಮೇಲೆ ಸಗಣಿ ಉಂಡೆಗಳು ಬೀಳುತ್ತಲೇ ಇದ್ದವು. ಬೇಗ ಬೇಗ ಹೆಜ್ಜೆ ಹಾಕುವಷ್ಟರಲ್ಲಿ ನಾಯಿಗಳು ಓಡಿಸಿಕೊಂಡು ಬಂದರೂ ಸಹ ಓಡಲಿಲ್ಲ. ಓಡಿದರೆ ನಾಯಿಗಳು ಮೇಲೆ ಬೀಳುತ್ತವೆ ಎಂಬುದು ನೆನಪಿಗೆ ಬಂದಿತು. ಹಿಂತಿರುಗಿ ನಿಂತು ಮುಖವನ್ನು ಕೊಟ್ಟು ಗದ್ದರಿಸಿಕೊಂಡರೆ ನಾಯಿಗಳು ತಮ್ಮ ಜಾಗದಲ್ಲಿ ನಿಲ್ಲುತ್ತವೆ. ಆದರೆ ಹಿಂದಕ್ಕೆ ಮುಖ ಮಾಡಿದರೆ ಸಗಣಿಯ ಉಂಡೆಗಳು ಮುಖಕ್ಕೆ ಬಂದು ಬೀಳುತ್ತವೆಂಬ ಭಯ. ಆದ್ದರಿಂದ ನಿಧಾನವಾಗಿ ಹೆಜ್ಜೆಯನ್ನು ಹಾಕಿದರು. ಯಾರೋ ಒಬ್ಬ ಗ್ಯಾ ಗ್ಯಾ ಗ್ಯಾ ಎಂದು ಕೂಗಿ ಸಿಳ್ಳು ಹಾಕಿದನು. ಹೆದರಿಕೆಯಿಂದ ದೂರದಲ್ಲಿ ನಿಂತು ಬೊಗಳುತ್ತಿದ್ದ ನಾಯಿಗಳು ನುಗ್ಗಿ ಬಂದವು. ಅದರಲ್ಲಿ ಒಂದು ನಾಯಿ ಮೇಲೆ ಬಿದ್ದು ಮೊಣಕಾಲೀನ ಮೀನು ಖಂಡಕ್ಕೆ ಹಲ್ಲು ಹಾಕಿ ಬಿಟ್ಟಿತು. ರಕ್ತವು ಬರತೊಡಗಿತ್ತು ಅಯ್ಯಯಪ್ಪಾ ಎಂದು ಬಡಿದುಕೊಂಡರು. ಸದ್ದಿಗೆ ನಾಯಿಗಳಿಗೂ ಭಯವಾಗಿರಬೇಕು. ಕುಡುಕರ ಪೈಕಿಯೇ ಒಬ್ಬ ಹತ್ತಿರ ಬಂದು ನಾಯಿಗಳಿಗೆ ಮುಪ್ಪಿರಿದು ಬಾ ಬಾ ಎಂದು ಕರೆದಾಗ ಹಿಂತಿರುಗಿದವು.

ವೆಂಕಟರಮಣಯ್ಯನವರು ತೋಟದ ದಾರಿಯಲ್ಲಿ ಹಿಂತಿರುಗಿದರು. ನಾಯಿ ಹಲ್ಲು ಕಚ್ಚಿದ್ದ ಜಾಗದಲ್ಲಿ ರಕ್ತ ಬರುತ್ತಿತ್ತು. ಕತ್ತಲೆಯಾದ್ದರಿಂದ ಯಾವುದು ಸರಿಯಾಗಿ ಕಾಣುತ್ತಿರಲಿಲ್ಲ. ಬೇಗ ಬೇಗ ಹೆಜ್ಜೆಯನ್ನು ಹಾಕಿ ಕಚ್ಚಿದ ಗಾಯವನ್ನು ಲೆಕ್ಕಿಸದೆ ಗದ್ದೆಗಳನ್ನು ದಾಟಿದರು. ಗುಡಿಸಲಿನ ಬಾಗಿಲು ತೆಗೆದು ಉರಿಯುತ್ತಿದ್ದ ಗಾಯವನ್ನು ಲಾಟೀನಿನಲ್ಲಿ ಕಾಲನ್ನು ನೋಡಿಕೊಂಡರು. ನಾಯಿಯ ಎರಡು ಹಲ್ಲು ಮಾಂಸಖಂಡದೊಳಗೆ ಕಚ್ಚಿ ರಕ್ತ ಹರಿದು ಹೆಪ್ಪುಗಟ್ಟಿದ್ದು ಕಾಣಿಸುತ್ತಿತ್ತು. ಹೋಗಿ ಕೊಳದಲ್ಲಿ ಇಳಿದು ಮೈ ಕೈಗಳನ್ನು ತಿಕ್ಕಿ ಸ್ನಾನ ಮಾಡಿದರು. ಉಟ್ಟಿದ್ದ ಬಟ್ಟೆಯನ್ನು ಕಸಿದು ಒಗೆಯಬೇಕನಿಸಿತು. ಆದರೂ ಸ್ವಲ್ಪ ಸುಧಾರಿಸಿಕೊಂಡು ಹೋಗೋಣವೆಂದು ಹಾಗೆಯೇ ಕುಳಿತರು. ಕುಳಿತ ಮೇಲೆ ಏಳುವ ಮನಸ್ಸು ಬರಲಿಲ್ಲ. ಬೆಳಕಿನಲ್ಲಿ ತಮ್ಮ ಮೈ ಕೈಗಳನ್ನೇ ನೋಡಿಕೊಳ್ಳುತ್ತಾ ಕೂತುಬಿಟ್ಟರು. ಸ್ವಲ್ಪ ಹೊತ್ತಾದ ಮೇಲೆ ಉರಿಯುತ್ತಿದ್ದ ಲಾಟೀನು ಆರಿಸಿ ಕತ್ತಲಲ್ಲಿ ಕುಳಿತರು. ಸಗಣಿಯಾದ ಬಟ್ಟೆಗಳನ್ನು ತೆಗೆದು ಕುಕ್ಕಿ ಹಿಂಡಿಕೊಂಡು ಬಿಸಿಲಿಗೆ ಹಾಕಿದರು. ಉಡಲು ಬೇರೆ ಬಟ್ಟೆ ಇಲ್ಲದಿದ್ದರಿಂದ ಒಂದು ಚೌಕವನ್ನು ಸುತ್ತಿಕೊಂಡು ಮೈಗೆ ದುಪಟಿ ಹೊದ್ದುಕೊಂಡರು.

ಸ್ವಲ್ಪ ಹೊತ್ತಿನಲ್ಲಿ ಯಾರೋ ತೋಟದೊಳಗೆ ನಡೆದುಕೊಂಡು ಇವರ ಗುಡಿಸಲು ಹತ್ತಿರ ಬಂದಂತೆ ಶಬ್ಧವಾಯಿತು. ಲಾಟೀನನ್ನು ಹೊರಗೆ ತಂದು ವೆಂಕಟರಮಣಯ್ಯ ನೋಡಿದರು. ಮಾತಂಗಿ ಅಲಂಕೃತವಾಗಿದ್ದುಕೊಂಡು ಬರುತ್ತಿದ್ದಾಳೆ, ಹತ್ತಿರಕ್ಕೆ ಬಂದಾಗ ಬಟ್ಟಿ ಮದ್ಯದ ಗಬ್ಬು ವಾಸನೆ ಹೊಡೆಯುತ್ತಿತ್ತು. ಅವರು ಅವಳನ್ನೇ ನೋಡುತ್ತಾ ನಿಂತರು. ಇವರಿಗೆ ಒಂದು ಮಾರು ದೂರದಲ್ಲಿ ಮಾತಂಗಿ ನಿಂತಳು. ಮಾತಂಗಿ ಇಲ್ಲಿಗ್ಯಾಕೆ ಬಂದೆ ಎಂದು ಕೇಳಿದರು. ನೀವು ನಮ್ಮ ಹಟ್ಟಿಗೆ ಏಕೆ ಬಂದಿದ್ದೀರಿ? ಎಂದು ಕೇಳಿದಳು. ಅದಕ್ಕೆ ಅವರು ಉತ್ತರವನ್ನು ಕೊಡಲಿಲ್ಲ. ಇಷ್ಟು ವರ್ಷದ ಮೇಲೆ ಮಾತಂಗಿ ನೆನಪು ಬಂತಾ? ಮರೆತು ಹರಿಜನ ಹಟ್ಟಿಗೆ ನುಗ್ಗಿಬಿಟ್ರಾ? ಹಾರುವವರು ಹರಿಜನ ಹಟ್ಟಿಗೆ ಬಂದರೆ ಮಹಾಲಕ್ಷ್ಮಿ ಹೊರಟು ಹೋಗುತ್ತಾಳೆ ಎಂದು ಗೊತ್ತಿರಲಿಲ್ವಾ? ಎಂದು ಕೇಳಿದಳು. ವೆಂಕಟರಮಣಯ್ಯನವರಿಗೆ ಗೊತ್ತಿಲ್ಲದ ವಿಷಯವಲ್ಲ. ಮುಟ್ಟಾಗಿದ್ದ ಲಕ್ಷ್ಮಿಯು ಒಂದು ಸಲ ಹಾರುವರ ಕೇರಿಗೆ ಬಂದು ವಿಶ್ರಮಿಸಿಕೊಳ್ಳಲು ಮೂರು ದಿನ ಜಾಗವನ್ನು ಕೇಳಿದಳು. ಮೈಲಿಗೆಯಾಗುತ್ತೆ ಅಂತ ಹೆದರಿ ಮಡಿಯ ಬ್ರಾಹ್ಮಣರು ನಿರಾಕರಿಸಿದರು. ಬೇಗನೆ ತಮ್ಮ ಕೇರಿಯನ್ನು ಬಿಟ್ಟುಹೋಗು ಎಂದು ಗದ್ದರಿಸಿಕೊಂಡರು. ಅನಂತರ ಅವಳು ಕೋಮಟಿಗರ ಕೇರಿಗೆ ಹೋದಳು. ಅಲ್ಲಿ ಅವರು ಅವಳಿಗೆ ಜಾಗವನ್ನು ಕೊಟ್ಟು ಉಪಚರಿಸಿದರು. ಅವರ ಮೇಲೆ ಲಕ್ಷ್ಮಿಯು ಸಂಪ್ರೀತಳಾದಳು. ಆದ್ದರಿಂದಲೇ ಅವರು ಎಲ್ಲೆಲ್ಲೂ ವ್ಯಾಪಾರವನ್ನು ಮಾಡಿಕೊಂಡು ಧನಿಕರಾಗಿದ್ದಾರೆ. ಅಲ್ಲೊಂದು ದಿನವಿದ್ದು ಅವಳು ಹೊಲೆಯರ ಕೇರಿಗೆ ಹೋಗುತ್ತಾಳೆ. ಅವರೂ ಸಹ ಭಯಭಕ್ತಿಗಳಿಂದ ತಮ್ಮ ಒಂದು ಗುಡಿಸಲನ್ನು ಬಿಟ್ಟುಕೊಟ್ಟು

ಉಪಚರಿಸಿದರು. ಅವರ ಮೇಲು ಅವಳು ಪ್ರಸನ್ನಳಾದಳು. ಆದರೆ ಬ್ರಾಹ್ಮಣರೊಬ್ಬರಿಗೆ ಲಕ್ಷ್ಮಿಯು ಒಲಿಯಲಿಲ್ಲ. ಆದ್ದರಿಂದಲೇ ಹಾರುವವರು ಎಲ್ಲಿ ಹೋದರೂ ಸಹ ಬಡವರಾಗಿದ್ದಾರೆ. ಅಂತಹ ಪಾಪಿಗಳು ತಮ್ಮ ಹಟ್ಟಿಗೆ ಬಂದರೆ ಲಕ್ಷ್ಮಿಯು ಮುನಿಸಿಕೊಂಡು ಹೋಗುತ್ತಾಳೆ. ಆದ್ದರಿಂದ ಅವರಿಗೆ ಸಗಣಿಯಲ್ಲಿ ಹೊಡೆದು ಓಡಿಸಬೇಕೆಂಬ ಶಾಸ್ತ್ರ ಹೊಲೆಯರಲ್ಲಿರುವುದನ್ನು ಕಾಣಬಹುದಾಗಿದೆ.

ಮಾತಂಗಿ ನಮ್ಮ ಹಟ್ಟಿಗೆ ಏಕೆ ಬಂದೆ? ಎಂದು ಕೇಳಿದಳು. ಆದರೂ ವೆಂಕಟರಮಣಯ್ಯ "ನಿನ್ನ ನೋಡಬೇಕು ಅನ್ನುಸ್ತು ಅದಕ್ಕೆ ಬಂದೆ"[೭] ಎಂದನು. ಅವಳು ಹಿಂತಿರುಗಿ ಬಂದಳು ಯಾವ ಸಂಕೋಚವು ಇಲ್ಲದೆ ಇವರ ಕೈ ಹಿಡಿದುಕೊಂಡಳು ಹಂಗೆ "ನಿಜ ಏಳ್ರಯ್ಯಾ ಮಾತಂಗಿಗೆ ನಿಮ್ಮ ನೆನಪು ಬತ್ತೈತೆನಿಮ್ಮ ಮರ್ವಾದಿಗೆ ಅಂಜಿ ನಾನು ನಿಮ್ತಾಕೆ ಬರಾಕಿಲ್ಲ"[೮] ಎಂದಳು. ಚಾಪೆಯ ಮೇಲೆ ಅವರನ್ನು ಕೂರಿಸಿ ಗುಡಿಸಲಿನ ಬಾಗಿಲು ಮುಚ್ಚಿ ತಾನು ಕುಳಿತಳು. ಅವಳ ಬಾಯಿಯಿಂದ ಬರುತ್ತಿದ್ದ ವಾಸನೆ ಒಳಗೆಲ್ಲ ತುಂಬಿಕೊಂಡು ಅವರಿಗೆ ಇರಸು ಮುರಸಾಗುತ್ತಿತ್ತು. ಆದರೆ ವೆಂಕಟರಮಣಯ್ಯ ಮಾತಂಗಿಯನ್ನು ನೋಡುತ್ತಾ ಕುಳಿತರು. ಮಾತಂಗಿಯ ಮುಖವು ಅಮಲಿನಿಂದ ಉಬ್ಬಿಕೊಂಡು ಜ್ವರಬಂದವಳಂತೆ ಕಾಣುತ್ತಿದ್ದಳು. ಕಣ್ಣು ಕೆಂಪಗೆ ತುಂಬಿಕೊಂಡಿತ್ತು. ಆದರೂ ಮಾತಂಗಿ ಕೇಳಿದಳು ಹ್ವಲೇರ ಅಟ್ಟಿ ಆಚೆ ಕಡೀದೇ ನಮ್ದು ನಾಯಿ ಕಡೀತಾ? ಎಂದಳು. ಅವರು ಬಲಗಾಲು ನೀಡಿದರು. ಅದನ್ನು ತೆಗೆದುಕೊಂಡು ತನ್ನ ತೊಡೆಯ ಮೇಲಿಟ್ಟುಕೊಂಡು ನೋಡಿದಳು. ಕಳ್ನನ್ ಹೆಂಡ್ತಿ ಮಗನ ನಾಯಿ ಹ್ಯಾಂಗ್ ಕಚ್ಚಿದೆ? ಅದರವುನ್ನಾ ನೋಯ್ತದೇನ್ರಯ್ಯಾ? ಎಂದು ಕೇಳಿದಳು.

ವೆಂಕಟರಮಣಯ್ಯನವರಿಗೆ ನೋವು ಕಾಣಿಸಿದಾಗ ಹೂಂ ಎಂದರು. ಅವರ ಕಾಲನ್ನು ಕೆಳಗಿಟ್ಟು ಲಾಟೀನನ್ನು ಕೈಲಿ ಹಿಡಿದುಕೊಂಡು ಅವಳು ಹೊರಗೆ ಹೋದಳು. ಬೇಲಿಯ ಹತ್ತಿರ ಹೋಗಿ ಹುಡುಕಿಕೊಂಡು ಎಳೆ ಚದುರಂಗದ ಸೊಪ್ಪನ್ನು ತಂದು, ಅದನ್ನು ತನ್ನ ಅಂಗೈಗೆ ಹಾಕಿಕೊಂಡು ಬಲಗೈಯಿಂದ ತಿಕ್ಕಿ ತಿಕ್ಕಿ ರಸ ಹೊರಡಿಸಿ, ಕೈಯನ್ನು ಗಾಯದ ಮೇಲೆ ತಂದು ಒಂದು ಸಲ ಬಲವಾಗಿ ಹಿಂಡಿದಳು. ತೊಟ ತೊಟನೆ ಬಿದ್ದ ರಸದಿಂದ ಉರಿಹತ್ತಿತ್ತು. ಅವರು ಹಾ ಎಂದರು ಉರಿತೈತೆ ಬೇಗ ಮಾಯುತ್ತದೆ ನಾಯಿಯ ಹಲ್ಲು ವಿಷ ಅಂದಳು ಕೈಲಿದ್ದ ಹೊಸಗಿದ್ದ ಸೊಪ್ಪನ್ನು ಗಾಯಕ್ಕೆ ಮೆತ್ತಿ ತನ್ನ ಸೀರೆಯ ಸೆರಗನ್ನು ಹಲ್ಲಿನಿಂದ ಕಚ್ಚಿ ಒಂದು ಪಟ್ಟಿ ಹರಿದು ಕಟ್ಟಿದಳು. ಅವರು ಸುಮ್ಮನೆ ಅವಳನ್ನೇ ನೊಡುತ್ತಾ ಕುಳಿತಿದ್ದರು. ಸ್ವಲ್ಪ ಹೊತ್ತಿನ ನಂತರ ನನ್ನನ್ನು ಏಕೆ ಹುಡುಕಿಕೊಂಡು ಬಂದಿದ್ರಯ್ಯ ಎಂದು ಕೇಳಿದಳು. ಅದಕ್ಕೆ ಅವರು ಸುಮ್ನೆ ಎಂದರು. ಹಾಗೆಯೇ ಸುಮ್ಮನೆ ಬರಬಾರದು. ನಮ್ಮ ಜಾತಿಯಲ್ಲಿ ಕಟ್ಟು ನಿಟ್ಟನ್ನು ಬೆಟ್ಟಯ್ಯನವರು ಮಾಡಿದ್ದಾರೆ. ಹೆಂಗಸರು ಇತರೆ ಜಾತಿಯವರ ಜೊತೆಯಲ್ಲಿ ಹೋಗಬಾರದು ಎಂದು ಹೇಳಿದ್ದಾರೆ. ಅವರ ಮಾತನ್ನು ಎಲ್ಲರೂ ಸಹ ಕೇಳುತ್ತಾರೆ ಎಂದರು. ಆದರೆ ಕೇಳುವರು

ಕೇಳುತ್ತಾರೆ ಇಲ್ಲದವರು ಇಲ್ಲ ನಾನು ಮಾತ್ರ ಕೇಳುತ್ತೇನೆ ಎಂದಳು. ಇಲ್ಲಿಗೆ ಏಕೆ ಬಂದೆ? ಕೋಪ ಮಾಡಿಕೊಬೇಡ ಬರಬೇಕು ಅಂತಿದ್ದೆ ಧೈರ್ಯವಾಗ್ತಿರ್ಲಿಲ್ಲ ನೀಮ್ ಹುಡ್ಗು ದೊಡ್ಡರಾಗಿಯವ್ರೆ ನನ್ನ ಮಗನೂ ಸಹ ಎಂದು ನಾಲಿಗೆ ಕಚ್ಚಿಕೊಂಡಳು.

ವೆಂಕಟರಮಣಯ್ಯನಿಗೆ ಕುಡ್ದು ಮಗ್ಗಿದ್ದೋಳನ್ನು ಮಾಯಾ ಮಂತ್ರ ಮಾಡ್ಲಿ ಒಂಗೇ ತ್ವಾಟದ ಗುಡ್ಲಿಗೆ ಕರ್ಕಂಡ ಬರಬಹುದೇನ್ರಯ್ಯ? ಜಾತಸ್ತುರು ಕಂಡ್ರೆ ಏನಂತಾರೆ? ನಿಮ್ಮ ಜಾತಿಯೋರು ಸುಮ್ನಿರ್ತಾರಾ? ಎಂದಳು. ಆಗ ಅವರು ಜಾತಿಯ ಬಗ್ಗೆ ಹೆದರಿಕೆ ಬೇಡ, ನಿನ್ನ ಬ್ರಾಹ್ಮಣಿಯನ್ನಾಗಿ ಮಾಡ್ತೀನಿ ಬಾ ಎಂದರು. ಮಾತಂಗಿ ಗೊಳ್ಳೆಂದು ನಕ್ಕಳು ಅವಳ ಬಾಯಿಯಿಂದ ವಾಸನೆ ಬರಿತ್ತಿರಲಿಲ್ಲ. ಕಣ್ಣಿನ ಕೆಂಪು ಮುಖದಲ್ಲಿ ಊದು ಕಾಣುತ್ತಿರಲಿಲ್ಲ. ಬೆಟ್ಟಯ್ಯನವರು ತೋಟದ ಗುಡಿಸಲಿಗೆ ಬಂದರು. ನೀವು ನಮ್ಮ ಕೆರಿಗೆ ಬಂದಿದ್ರಂತೆ ಎಂದು ಕೇಳಿದರು. ವೆಂಕಟರಮಣಯ್ಯನವರ ಮುಖವು ಪೆಚ್ಚಾಯಿತು. ಹಾರುವ ಕೇರಿಗೆ ನಮ್ಮನ್ನು ಸೇರಿಸುವುದಿಲ್ಲ. ಆದ್ದರಿಂದ ನಾವು ಸಹ ಸೇರಿಸಬಾರದು ಎಂದು ಕಥೆಯನ್ನು ಕಟ್ಟಿದ್ದಾರೆ. ಬೆಟ್ಟಯ್ಯನವರು ತನ್ನ ಮಗಳ ವಿಚಾರವನ್ನು ಹೇಳುತ್ತಾ ಒಂದು ಜವಳಿ ಅಂಗಡಿಯಲ್ಲಿ ಬಟ್ಟೆ ವ್ಯಾಪಾರಕ್ಕೆ ಸೇರಿಕೊಂಡಿದ್ದಾಳೆ ಎಂದರು. ಆದರೂ ಇಷ್ಟೊಂದು ಓದಿಕೊಂಡು ಏಕೆ ಅಲ್ಲಿಗೆ ಸೇರಿಕೊಂಡಳು ಮನೆಗೆ ಬರಬಹುದಾಗಿತ್ತಲ್ಲ ಎಂದರು.

ಬೆಟ್ಟಯ್ಯನವರು ನೀವು ಕೋಪ ತೋರಿಸಿದ್ದರಿಂದ ಯಾವ ಧೈರ್ಯಮಾಡಿ ಬರುತ್ತದೆ ಹೇಳಿ ಎಂದರು. ಅವರು ಗಂಭೀರರಾದರು! ಅಂತರ್ಮುಖಿಯಾಗಿ ಕುಳಿತುಬಿಟ್ಟರು. ಅನಂತರ ಇದಕ್ಕಿದ್ದ ಹಾಗೇಯೇ ಎದ್ದು ಗುಡಿಸಲಿನ ಬಾಗಿಲಿಗೆ ಹೋದರು. ತಮ್ಮ ಹಳೆಯ ಎಕ್ಕಡಗಳನ್ನು ಎರಡು ಕೈಯಲ್ಲಿ ಒಡಿದುಕೊಂಡು ತಮ್ಮ ತಲೆ ಭುಜ, ತೋಳುಗಳಿಗೆ ಪಟ ಪಟನೆ ಹೊಡೆದುಕೊಳ್ಳಲು ಪ್ರಾರಂಭಿಸಿದರು. ಸ್ವಾಮಿಗಳೇ ಎಂತಾ ಕೆಲಸವನ್ನು ಮಾಡ್ತೀರ? ಬೇಡ ಎಂದು ಬೆಟ್ಟಯ್ಯ ಹೇಳಿದರು. ಶಾಂತಿ ತಪ್ಪು ಮಾಡಿದೆ ಎಂದು ಗೊತ್ತಿದ್ದರೂ ಸಹ ಶಾಂತಿ ಎನ್ನುತ್ತಿದ್ದರು ಮಹಾತ್ಮರು ಎಂದು ಹತ್ತಿರ ಬಂದರು. ಚಪ್ಪಲಿಯಲ್ಲಿ ಹೊಡೆದುಕೊಂಡ ಮೇಲೆ ಚಪ್ಪಲಿಗಳನ್ನು ತೆಗೆದು ದೂರ ಬಿಸಾಕಿದರು. ಅಷ್ಟರಲ್ಲಿ ಕಣ್ಣಿನಿಂದ ನೀರು ಹನಿಯುತ್ತಿತ್ತು. ಅದಕ್ಕೆ ನಾನು ಸಹ ಹೊಡೆದುಕೊಂಡೆ. ಮನಸ್ಸಿಗೆ ಸ್ವಲ್ಪ ಸಮಾಧಾನವಾಯಿತು. ನಿನಗೆ ಸಿಕ್ಕಿದ್ಲೆ? ಮಾತನಾಡಿದ್ಲೆ? ಎಲ್ಲಾ ಹೇಳು ಎಂದರು. ಮೇಲಗಿರಿಗೌಡನ ಮಗನ ಮದುವೆಗೆ ಜವಳಿ ತರುವುದಕ್ಕೆ ಸತ್ಯನಾರಾಯಣ ಹಾಲ್‌ಗೆ ಹೋದೆವು. ಅವರು ಎಡಗಡೆಗೆ ಕರೆದುಕೊಂಡು ಹೋದಾಗ ಸತ್ಯ ಎಲ್ಲ ಜವಳಿಯನ್ನು ತೋರಿಸು ಎಂದರು.

ಸತ್ಯಭಾಮಳನ್ನು ನೋಡಿದ ತಕ್ಷಣ ಇವರಿಗೆ ಪೆಚ್ಚಾಯಿತು. ನಂತರ ಬರುತ್ತೇವೆ ಎಂದು ಹೇಳಿ ಬಂದೇವು. ಆಗ ಸತ್ಯಭಾಮಳು ಎಲ್ಲಾ ವಿಚಾರವನ್ನು ಹೇಳಿದಳು. ನನ್ನ ವಿಚಾರವನ್ನು ಯಾರ ಹತ್ತಿರವು ಹೇಳಬೇಡಿ ಎಂದಿದ್ದಳು. ಮನಸ್ಸು ತಡೆಯಲಾರದೆ ನಿಮ್ಮ ಹತ್ತಿರ ಹೇಳಿದೆ. ದೇವಸ್ಥಾನ ಸುತ್ತಲು ಸುತ್ತಾಡಿ ಕಾಲುವೆಗೆ ಹೋಗಿ ಮೈಲಿಗೆ ತೊಳೆದುಕೊಳ್ಳುವಂತೆ ಕೈಕಾಲು ತೊಳೆದುಕೊಂಡರು. ಮಾದಿಗರ ಕೇರಿಯ ಹತ್ತಿರಕ್ಕೆ ಹೋಗಿ ಮರದ ಕೆಳಗೆ ನಿಂತರು. ಬೆಟ್ಟಯ್ಯನ ಮನೆ ಯಾವುದ್ರೊ ಎಂದು ಕೂಗಿದರು. ಹೊಲದಲ್ಲಿ ಗರಿಕೆ ಕೀಳುತ್ತಿದ್ದ ಮುದಿಕಿ ಬೆಟ್ಟಯ್ಯನ ಕರಿಬೇಕೆನ್ರಯ್ಯ ಎಂದು ಕೇಳಿದಳು. ಕರೆಯಿರಿ ಎಂದು ಹೇಳಿದ ಎರಡು ನಿಮಿಷದಲ್ಲಿ ಬೆಟ್ಟಯ್ಯ ಬಂದರು. ನನ್ನ ಮಗಳ ಹತ್ತಿರಕ್ಕೆ ಹೋಗಬೇಕು ಅಂಗಡಿಯ ಹೆಸರನ್ನು ಹೇಳುತ್ತೇನೆ ಯಾರಾದರೂ ಕೇಳಿದರೆ ಹೇಳುತ್ತಾರೆ. ಹಳೇ ರೂಮಿನಲ್ಲಿ ವಾಸವಾಗಿದ್ದಾರೆ. ನನಗೆ ಗೊತ್ತಾಗಲ್ಲ ಖರ್ಚುವೆಲ್ಲ ನನ್ನದು ಬರಬೇಕು ಎಂದರು. ಊರೊಳಗೆ ಹೋಗಿ ಮನೆಯ ಹತ್ತಿರ ಬಂದರು. ವೆಂಕಟೇಶ ದುಡ್ಡು ಬೇಕು ಎಂದರು. ಯಾಕೆ ದುಡ್ಡು ಎಂದು ಕೇಳಿದನು. ತಂದು ಕೊಡೊ ಬೋಳಿಮಗನೆ ತನಿಖೆಯನ್ನು ಮಾಡುತ್ತಾನೆ ಎಂದು ರೇಗಿದರು. ಆಗ ಅವನು ಮಾತನಾಡದೆ ತಂದು ಕೊಟ್ಟನು ತೋಟದ ಗುಡಿಸಲಿಗೆ ಬಂದರು.

ಮಾರನೆಯ ದಿನ ವೆಂಕಟರಮಣಯ್ಯ ಬೆಟ್ಟಯ್ಯನನ್ನು ಜೊತೆಗೆ ಕರೆದುಕೊಂಡು ಬೆಂಗಳೂರಿಗೆ ಹೋದರು. ಸ್ವಾಮಿಯರೇ ಬಟ್ಟೆ-ಬರಿಗಳನ್ನೆಲ್ಲಾ ಏಕೆ ತೆಗೆದು ಹಾಕಿದ್ದೀರಾ ಎಂದು ಕೇಳಿದರು. ಮೋಟಾರ್ನಾಗೆ ನಿನ್ನ ಮುಟ್ಟಿಸ್ಕಂಡಿದ್ನಲ್ಲಯ್ಯ, ಸ್ನಾನ ಮಾಡಿ ತೊಳೆದು ಹಾಕಿದೆ ಎಂದರು. ಬೆಟ್ಟಯ್ಯನವರಿಗೆ ತಕ್ಷಣ ಪೆಚ್ಚಾಯಿತು. ತಮ್ಮ ಪಕ್ಕದಲ್ಲಿ ಕೂರುವಂತೆ ಕರೆದರು. ಪರವಾಗಿಲ್ಲ ಬಿಡ್ರಿ ಎಂದಿದ್ದರು. ಮಡಿಗಿಡಿಯೆಲ್ಲ ಸುಳ್ಳು ಬಾರಯ್ಯ ಎಂದು ಕೈ ಹಿಡಿದು ಎಬ್ಬಿಸಿಕೊಂಡು ಹೋಗಿದ್ದರು. ದಾರಿಯ ಉದ್ದಕ್ಕೂ ಆತ್ಮೀಯವಾಗಿ ಮಾತನಾಡುತ್ತಿದ್ದರು. ಆದರೆ ಇವರಿಗೆ ಬುದ್ಧಿ ಭ್ರಮಣೆ ಆಗಿದೆ ಎಂದು ತಿಳಿದುಕೊಂಡರು. ಕುರ್ಚಿ ಮೇಲೆ ಕುಳಿತುಕೊ ಬಾ ಎಂದರು. ಜಾತಿ ಗೀತಿ ಎಲ್ಲಾ ಸುಳ್ಳು ವಸಿಷ್ಠ ಮಹರ್ಷಿಗಳೇ ಬ್ರಹ್ಮ ತೇಜಸ್ಸಿನ ಮುಂದೆ ಕ್ಷತ್ರಿಯತ್ವ, ಶೂದ್ರತ್ವ, ದಾಸತ್ವ ಎಲ್ಲಾ ಬ್ರಹ್ಮತ್ವವೇ ಆಗುತ್ತವೆ. ಇವರ ಮಾತು ಅವರಿಗೆ ಅರ್ಥವಾಗಲಿಲ್ಲ. ಸುಮ್ಮನೆ ಒಂದು ಕುರ್ಚಿಯನ್ನು ಸ್ವಲ್ಪ ದೂರವೇ ಎಳೆದುಕೊಂಡು ಕುಳಿತರು.

ಜಾತಿಯು ವೃತ್ತಿಯಿಂದ ಬೆಳೆಯಿತು. ಅದು ಆರ್ಥಿಕ ರಚನೆಗೆ ಅಂಟಿಕೊಂಡಿರುವ ಪಾಚಿ ಮಾತ್ರ ಎಂದು ಹೇಳುತ್ತಾರೆ. ಸತ್ಯಭಾಮಳು ಮೋಹನದಾಸನನ್ನು ನಿಮ್ಮ ತಂದೆಯನ್ನು ನೋಡಬೇಕಾಗಿತ್ತು ಸ್ವಲ್ಪ ಕರೆಸಿದರೆ ಉಪಕಾರವಾಗುತ್ತದೆ. ಇಲ್ಲೆ ಕಾಯುತ್ತಾ ಇರುತ್ತೇನೆ ಎಂದಳು. ಎದ್ದು ಹೋದವನು ಮತ್ತೆ ಮನೆ ಒಳಗೆ ಬಂದು ಕೂತಕೋ ಕೂಡದು ಅಂತಲೊ? ಮಡಿಯೋ? ಎಂದನು. ಅವನು ಆಡಿದ ಮಾತುಗಳಲ್ಲಿ ಜಗಳ ಗಂಟತನ ಎದ್ದು ಕಾಣುತ್ತಿತ್ತು. ಆದರೆ ಅವಳು ಸಮಾಧಾನವಾಗಿಯೇ ಹೇಳಿದಳು. ಬರಬಾರದು

ಅಂತಲೇ ಇಲ್ಲ ಬಂದರೆ ನಿಮ್ಮ ಜನವೇ ಸೇರಿಸಲ್ಲ ಏಕೆ ಸುಮ್ಮನೆ ಇಲ್ಲದ್ದು ಮಾಡಬೇಕು? ಎಂದಳು. ಆದರೆ ನೀವು ಬರಕೂಡದು ಎಂದು ನಿಮ್ಮ ತಪ್ಪನ್ನು ನಮ್ಮ ಮೇಲೆ ಹಾಕುವುದಕ್ಕೆ ಕತೆ ಕಟ್ಟಿ ನಮ್ಮ ಜನವೇ ನಂಬುವ ಹಾಗೆ ಮಾಡಿದ್ದೀರಿ ಎಂದನು. ಮೋಹನದಾಸನ ಹತ್ತಿರ ಜಗಳವಾಡಬಾರದೆಂದು ಅವಳು ನಿರ್ಧರಿಸಿದಳು. ಯಾರು ಕಥೆ ಕಟ್ಟಿದರೂ ಬೇಡ ನಾನು ಬರುತ್ತೇನೆ ನಡೀರಿ ಎಂದು ಮುಂದೆ ಹೆಜ್ಜೆಯನ್ನು ಹಾಕಿದಳು. ಈ ಅನೀರೀಕ್ಷತತೆಯಿಂದ ಅವನು ಕಕ್ಕಾಬಿಕ್ಕಿಯಾದನು. ಮುಂದೆ ಏನು ಮಾತನಾಡಬೇಕೆಂದು ತಿಳಿಯದೆ ಸೋತವನಂತೆ ನಿಂತು ಬಿಟ್ಟನು. ಸತ್ಯಭಾಮಳು ನೀವು ಹೇಳಿದ ಮೇಲೆ ಬರ್ತಿದ್ದೇನೆ. ನಿಮ್ಮ ಜನ ಜಗಳವನ್ನು ಮಾಡುವುದಾಗಲಿ ಸಗಣಿ ತೊಪ್ಪೆಲೀ ಹೊಡೆಯುವುದಾಗಲೀ ಮಾಡದ ಹಾಗೆಯೇ ನೋಡಿ ಕೊಳ್ಳಬೇಕು. ಪೂರ್ತಿ ಜವಾಬ್ದಾರಿ ನಿಮ್ಮದು. ಆಗಲಿ ಮುಂದೆ ಬನ್ನೀ ಎಂದು ಪೂರ್ತಿಯಾಗಿ ಸೋತು ಹೋದನು. ಮತ್ತೆ ಮಾತನಾಡದೆ ಹೆಜ್ಜೆಯನ್ನು ಹಾಕಿದನು. ನೀವು ತುಮಕೂರಿನಲ್ಲಿ ಚಪ್ಪಲಿಗಳ ವ್ಯಾಪಾರ ಮಾಡುತ್ತೀರಾ? ಈ ಚಪ್ಪಲಿಗಳನ್ನು ಇಲ್ಲಿಂದಲೇ ಮಾಡಿಸಿಕೊಂಡು ಹೋಗುತ್ತೀರಾ? ಎಂದು ಕೇಳಿದಳು. ಅದಕ್ಕೆ ಅವನು ಇದು ಸೈಡ್ ಬಿಸಿನೆಸ್ ಮುಖ್ಯವಾಗಿ ಬಾಟಾ ಶೂಸ್, ಕಾನ್ಪೂರ್ ಚಪ್ಪಲಿಗಳ ಏಜೆನ್ಸಿ ಇದೆ. ಒಬ್ಬ ಸೇಲ್ಸ್ ಕ್ಲರ್ಕ್ ನಿಮ್ಮ ಬ್ರಾಹ್ಮಣರವನು ಒಬ್ಬ ಸೇಲ್ಸ್ ಬಾಯ್ ಗೌಡರವನು ಇನ್ನೊಬ್ಬ ಬ್ರಾಹ್ಮಣರವನು. ಆವನು ಮಾತು ಅನಾವಶ್ಯಕ ಮಾತ್ರವಲ್ಲ ಬೇಕೆಂದೇ ಅವಳನ್ನು ಅವಮಾನಿಸುವಂತಿತ್ತು. ಸತ್ಯಭಾಮಳಿಗೆ ತಮ್ಮ ತಂದೆಯವರ ಬಗ್ಗೆ ನಿಮ್ಮ ಕೇರಿನ ಹೆಂಗಸರನ್ನು ಇಟ್ಟುಕೊಂಡಿದ್ದಾರೆ ಎಂಬ ಅನುಮಾನವು ಬಂದಿತು. ಅದಕ್ಕೊಸ್ಕರವೇ ಕೆಳಕೆ ಬಂದೆ ಎಂದಳು. ತಮ್ಮ ಮತ್ತು ಬಲಗೈ ಕೇರಿಗಳ ಕೆಲವು ಹೆಂಗಸರು ಊರೊಳಗಿನ ಮೇಲು ಜಾತಿಯವರ ಸಂಪರ್ಕವನ್ನು ಇಟ್ಟುಕೊಂಡಿರುತ್ತಿದ್ದರು. ಮೊದಲಿನಿಂದಲೂ ವಿಷಯವು ತಿಳಿದಿತ್ತು. ಆದರೆ ಮಹಾತ್ಮರು ಆಶ್ರಮದಿಂದ ಬಂದು ಕೇರಿಯ ಮುಖಂಡರಾದ ಮೇಲೆ ಹಾಗೆ ಮಾಡಬಾರದು. ಅದು ಪಾಪ ಎಂದು ಹೇಳಿದರು. ಅದನ್ನು ತಪ್ಪಿಸಲು ಬೆಟ್ಟಯ್ಯನವರು ಸಹ ಪ್ರಯತ್ನ ಪಟ್ಟಿದ್ದರು.

ಬೆಟ್ಟಯ್ಯನವರ ಮಗ ಮೋಹನದಾಸ ವೆಂಕಟರಮಣಯ್ಯನವರನ್ನು ಜನರ ಮಧ್ಯದಲ್ಲಿ ನಿಂತುಕೊಂಡು ಮನಸ್ಸಿಗೆ ಬಂದಂತೆ ಬಯ್ಯುತ್ತಿದ್ದನು. ಸತ್ಯಭಾಮಳು ದೇವಸ್ಥಾನದ ಕಡೆಗೆ ಸರಸರನೇ ಹೆಜ್ಜೆಯನ್ನು ಹಾಕಿದಳು. ಆದರೂ ಹತ್ತಿರ ಹೋದಂತೆ ಕೇಳತೊಡಗಿತು ಮೇಲು ಜಾತಿಯವರೆಲ್ಲ ನಮ್ಮ ಜಾತಿಯ ಹೆಂಗಸರನ್ನು ಹಾದರಗಿತ್ತಿಯರಾಗಿ ಮಾಡುತ್ತಿದ್ದಾರೆ. ಲೇ ಹಾರುವಯ್ಯ ಅದು ಯಾರು ಅಂತ ಪತ್ತೆಯಾಗಲಿ. ನಿನ್ನ ಮೇಲೆ ಕೇಸು ಹಾಕಿಸಿ ಜೀವನಾಂಶವನ್ನು ವಸೂಲಿ ಮಾಡುಸ್ತೀನಿ. ನಿಮ್ಮ ಜನ ಅಂದರೆ, ಏನೂಂತ ತಿಳ್ಕಂಡೆ ಎಂದು ಕೂಗಾಡುತ್ತಿದ್ದನು. ಆದಿ ದ್ರಾವಿಡರು ನಾವೇ ಈ ಭೂಮಿಯ ಮೂಲ ಅಧಿಕಾರ ನಮ್ಮದು ಎಂದನು. ಅವನ ಮಾತಿನ ಜೋರತ್ತಿಗೆ ಬೆರಗಾಗಿ ಉಳಿದವರು "ಹೋಗಲಿ

ಬಿಡಪ್ಪ, ಆ ಹುಚ್ಚರ ಕೈಲಿ ಏನು ಮಾತು?"[೯] ಎಂದು ಸಮಾಧಾನ ಹೇಳುತ್ತಿದ್ದರು. ಆದರೂ ಸಹ ಅವನು ರೇಗುತ್ತಿದ್ದನು. ಸುಮ್ಮನಿರಬೇಕೆ? ಈ ಊರಲ್ಲಿ ಅದ್ಯಾರು ಮೀಸೆ ಹೊತ್ತ ಗಂಡಸರಿದ್ದಾರೆ ಮೇಲು ಜಾತಿಯವರನ್ನೆಲ್ಲಾ ಪಂಚಾಯಿತಿಗೆ ಕೂರಿಸುತ್ತೇನೆ. ಈ ವಯ್ಯನ್ನ ಎದುರಿಗೆ ನಿಲ್ಲಿಸಿ ನ್ಯಾಯ ಕೇಳುಸ್ತೀನಿ. ತುಂಬಿದ ಸಭೇಲಿ ತಾಳಿ ಕಟ್ಟೂತನಕ ಬಿಡಲ್ಲ ಎಂದನು. ಆದರೆ ಬೆಟ್ಟಯ್ಯನವರು ವಶಿಷ್ಠ ಶಾಪ ಅಂದರೆ ಏನು? ಅಂತ ಈ ಮೂರ್ಖನಿಗೆ ಗೊತ್ತಿಲ್ಲ. ಬ್ರಹ್ಮದಂಡ ಪ್ರಯೋಗಿಸುತ್ತೇನೆ ಎಂದು ಗಟ್ಟಿಯಾಗಿ ಉತ್ತರ ಕೊಟ್ಟರು.

ಅಷ್ಟರಲ್ಲಿ ಅಲ್ಲಿಗೆ ಬಂದ ಸತ್ಯಭಾಮಳು ಮೋಹನದಾಸನನ್ನು ಉದ್ದೇಶಿಸಿ, ನಿಮ್ಮ ವರ್ತನೆ ಜವಾಬ್ದಾರರಿಗೆ ತಕ್ಕದಲ್ಲ, "ಅವರೊಬ್ಬ ರೋಗಿ. ಅವರಿಗೆ ಏನು ಮಾಡಬೇಕೂಂತ ಗೊತ್ತಾಗದೆ ನಾವು ಒದ್ದಾಡ್ತಿದ್ದೀವಿ. ನೀವು ಹುಚ್ಚರ ಹಾಗೆ ಆಡಬಾರದು"[೧೦] ಎಂದಳು. "ನಮ್ಮ ಜಾತಿಯೋರು ಅಂದ್ರೆ"[೧೧] ಎಂಬ ಅವನ ಮಾತನ್ನು ಅರ್ಧಕ್ಕೆ ತಡೆದು ಅವಳು "ನಿಮ್ಮ ಜಾತಿಗೆ ನೀವಲ್ಲ ಯಜಮಾನರು. ನಿಮ್ಮ ತಂದೆ ಈ ಊರಿಗೂ ನೀವೂ ಮುಖಂಡರಲ್ಲ. ಮರ್ಯಾದೆಯಾಗಿ ಈ ಜಾಗದಿಂದ ಹೊರಟು ಹೋಗಿ. ದೇವಸ್ಥಾನ ಇರೋದು ಜಗಳ ಕಾಯೋಕಲ್ಲ"[೧೨] ಎಂದು ದಬಾಯಿಸಿದಳು. ಅಲ್ಲಿ ಸೇರಿದ್ದವರು ನ್ಯಾಯ ನ್ಯಾಯ ಎಂದರು. ಆದರೂ ಮಾದಿಗರ ಹುಡುಗ ದೇವಸ್ಥಾನದ ಪೌಳಿಯೊಳಕ್ಕೆ ಬಂದಿದ್ದು, ಅವರಿಗೂ ಸೈರಣೆಯಾಗಿರಲಿಲ್ಲ. ಆದರೆ ಮೋಹನದಾಸನಿಗೆ ಹಾಗೆಂದು ಹೇಳುವಷ್ಟು ಧೈರ್ಯ ಯಾರಿಗೂ ಇರಲಿಲ್ಲ. ಸತ್ಯಭಾಮಳ ಧೈರ್ಯವನ್ನು ಅವರು ಮೆಚ್ಚಿಕೊಂಡಿದ್ದರು. ಮೋಹನದಾಸನಿಗೆ ನಾಚಿಕೆಯಾಗಿ ಸಿಟ್ಟಿನಿಂದಲೇ ದಿಬ್ಬವನ್ನು ಇಳಿದು ಹೋಗಿದ್ದ. ಅಪ್ಪನನ್ನು ಜೊತೆಯಲ್ಲಿ ಕರೆದುಕೊಂಡು ಸತ್ಯಭಾಮ ತೋಟಕ್ಕೆ ಬಂದಳು. ಅವರು ಇನ್ನೂ ಬ್ರಹ್ಮದಂಡ, ಋಷಿ ಶಾಪ ಎಂದು ಬಡಬಡಿಸುತ್ತಲೇ ಇದ್ದರು ಗುಡಿಸಿಲೊಳಗೆ ಬಂದ ಮೇಲೆ ಅಗ್ನಿಯನ್ನು ಹೊತ್ತಿಸಿಕೊಂಡು ಹವನವನ್ನಾರಂಭಿಸಿದರು.

ಮಾರನೆಯ ದಿನ ಬೆಟ್ಟಯ್ಯ ಬಂದು ಮಾತಂಗಿ ಮತ್ತು ವೆಂಕಟರಮಣಯ್ಯನವರ ಸಂಬಂಧದ ಬಗೆಗೆ ತಾವು ಸಂಗ್ರಹಿಸಿದ ಸಂಗತಿಗಳನ್ನೆಲ್ಲ ಸತ್ಯಭಾಮಳಿಗೆ ತಿಳಿಸಿದರು. ವೆಂಕಟರಮಣಯ್ಯನವರು "ಪ್ರಪಂಚ ಆರಂಭವಾಗುವ ಮೊದಲು ಬರೀ ನೀರಿತ್ತು. ನೀರು ಅಂದರೆ ಏನು? ಮಹಾನ್ ಜಲರಾಶಿ! ಎಲ್ಲೆಲ್ಲಾ ನೀರೇ ನೀರು, ಭೂ ಭಾಗ ಇಲ್ಲವೇ ಇಲ್ಲ. ಅಸ್ತಿತ್ವಕ್ಕೆ ಬರದ ಭೂಮಿಯ ಭಾಗ ಇರುವುದು ಹ್ಯಾಗೆ ಸಾಧ್ಯ? ಈ ಜಲದ ಮಧ್ಯೆ ಒಂದು ಆಲದ ಮರ, ಆಮೇಲೆ"[೧೩] ಎಂದು ತಾವು ಹೇಳಬೇಕೆಂದಿದ್ದ ವಿಷಯವು ಮರೆತು ಹೋದಂತೆ ಜ್ಞಾಪಿಸಿಕೊಳ್ಳತೊಡಗಿದರು. ವೆಂಕಟರಮಣಯ್ಯನನ್ನು ಹುಡುಕುವ ವೇಳೆಗೆ ಜನಿವಾರಕ್ಕೆ ಕಲ್ಲನ್ನು ಕಟ್ಟಿಕೊಂಡು ಬಿದ್ದವ್ರೆ. ಇವತ್ತಿನ ಬೆಳಿಗ್ಗೆ ನೀರಿನಾಗೆ ಅಲೆ ಇರ್ನಿಲ್ಲ ತಿಳಿಯಾಗಿತ್ತು. ಮಗ್ಗದ ಕೇರಿ ಚೆನ್ನಣ್ಣ ಎಲ್ಡ ಮಾಡಿ ನೀರು ತೊಗನಾಕೆ ಅಂತ ಹೋದಾಗ ಕಂಡಿತು

ಎಂದು ಊರಿಗೆ ಬಂದು ಹೇಳಿದನು. ಅಷ್ಟರಲ್ಲಿ ಅವಳಿಗೆ ತಲೆಸುತ್ತಿ ಬಂದಂತೆ ಆಯಿತು. ಬಾಗಿಲುವಾಡವನ್ನು ಒರಗಿ ಕುಳಿತಳು. ಹಾಗೇಯೇ ನೆಲದ ಮೇಲೆ ಕುಸಿದು ಬಿಟ್ಟಳು. ಪ್ರಜ್ಞೆ ತಪ್ಪಿರಬೇಕೆಂದು ಗೊತ್ತಾದ ತಕ್ಷಣ ಒಳಗೆ ಬಂದು ಚೊಂಬಿನಲ್ಲಿದ್ದ ನೀರು ತೆಗೆದುಕೊಂಡು ಅವಳ ತಲೆಗೆ ತಟ್ಟಿದನು. ಹವನ ಕುಂಡದ ಹತ್ತಿರ ಇಟ್ಟಿದ್ದ ಒಂದು ಅಡಿಕೆ ಪಟ್ಟೆಯಲ್ಲಿ ಗಾಳಿ ಹಾಕಿದನು. ಎರಡು ನಿಮಿಷದಲ್ಲಿ ಪ್ರಜ್ಞೆ ಬಂತು. ಅವಳು ಕಣ್ಣು ಬಿಟ್ಟಳು ಇನ್ನೊಂದು ವಸಿ ಮನಿಕಳಿ ಎಂದು ಅವನು ಹೇಳಿದರೂ ಕೇಳದೆ ಎದ್ದು ಕುಳಿತಳು. ನಂತರ ಅವನ ಸಂಗಡವೇ ಹೊರಟಳು ಅಲ್ಲಿ ಸೇರಿದ್ದ ಗುಂಪಿನಲ್ಲಿ ಒಬ್ಬರು ಬೆಟ್ಟಯ್ಯನ ಮಗನಿಂದಲೇ ವೆಂಕಟರಮಣಯ್ಯನವರು ಪ್ರಾಣವನ್ನು ಕಳೆದುಕೊಂಡರು. ಮತ್ತೊಬ್ಬರು ಅವನೇ ಹಿಡಿದುಕೊಂಡು ಹೊಟ್ಟೆಗೆ ಕಲ್ಲುಕಟ್ಟಿ ಕೆರೆಗೆ ಮುಳುಗಿಸಿರಬಹುದು ಎಂಬ ವಿವರಣೆಯು ಅತ್ಯಂತ ಸಹಜವಾಗಿ ಒಪ್ಪಿಗೆಯಾಯಿತು. ಮೇಲು ಜಾತಿಯವರ ಮೀಸೇನ ನನ್ನ ಉಚ್ಚೇಲಿ ಬೋಳುಸ್ತೀನಿ ಅಂತಿದ್ದ ಮಾದಿಗ ನನ್ಮಗ ಅವನ ಮೀಸೆ ಹಿಡಿದು ಕೀಳಬೇಕು. ಜಿರಲೇದ ಮಾಡಿದ ಹಾಗೆ ಇನ್ನೊಬ್ಬರು ಹೇಳಿದರು ಸಹ ಎಲ್ಲಾ ಜನರು ಹೇಳಿಕೆ ಮತ್ತು ಸಾಕ್ಷಿಯನ್ನು ಕೋಡುವಾಗ ತಕ್ಕ ಶಿಕ್ಷೆ ಮಾಡಿಸಬೇಕೆಂದು ವೆಂಕಟೇಶ ನಿಶ್ಚಯಿಸಿದನು.

ಪಟೇಲ ತಿರುಮಲೇಗೌಡರು ವಿಷಯವನ್ನು ತಿಳಿದುಕೊಂಡು ಬಂದರು. ಚಂಡಾಲ ನನ್ಮಗನ್ನ ತಂದು ಕುತ್ತಿಗೆ ಚೆಂಡ ಮ್ಯಾಲೆ ಮಿದ್ದು ಎಳ್ಕಂಡು ಬಾ ಹೋಗುಲ್ರಾ, ಅವನ ಬುಲ್ಡೆ ಚಚ್ಚಿಹಾಕುಸ್ತೀನಿ ಎಂದು ತಮ್ಮ ಆಳುಗಳಿಗೆ ಗರ್ಜಿಸಿದರು. ಅಲ್ಲಿದ್ದ ಪೋಲೀಸ್ ಸಬ್ಇನ್ಸ್‌ಪೆಕ್ಟರ್ ಅವನ ಮೇಲೆ ಗುಮಾನಿ ಇದ್ದರೆ ಹೇಳಿಕೆಕೊಡಿರಿ ಅರೆಸ್ಟ್ ಮಾಡಿ ಕೇಸ್ ಹಾಕ್ತೀವಿ. ನೀವು ಕೋರ್ಟಿಗೆ ಬಂದು ಸಾಕ್ಷಿಯನ್ನು ಹೇಳಿ ಕೋರ್ಟಿನೋರ್ ಬೇಕಾದರೆ ನೇಣು ಹಾಕಲಿ ಎಂದರು. ನಮ್ಮೂರ ನ್ಯಾಯ ತೀರ್ಮಾನ ಮಾಡುಕ್ಕೆ ಇವನ್ಯಾವೂರ್ನೋಪ್ಪಯ್ಯ ದೋಣೆ ನಾಯ್ಕ? ಎಂದು ಕೋಪದಿಂದ ಪಟೇಲರು ಹೇಳಿದರು. ತಮ್ಮ ಅಧಿಕಾರವನ್ನು ದಿಕ್ಕರಿಸಿ ಮಾತನಾಡಿದಕ್ಕೆ ಸಬ್ ಇನ್ಸ್‌ಪೆಕ್ಟರಿಗೆ ಸಿಟ್ಟೇನೋ ಬಂತು, ಆದರೆ ಹಾಗೆ ದಿಕ್ಕರಿಸಿದರು. ಊರಿನ ಯಜಮಾನರು ಮಾತ್ರವಲ್ಲ, ಮಂತ್ರಿಗಳ ತಂದೆ, ಎಂಬ ಯೋಚನೆ ಬಂತು. ಹಾಗೆಯೇ ಜನಗಳು ನುಗ್ಗಿ ಏನಾದರೂ ಅನಾಹುತವಾಗಿ ಮೇಲಾಧಿಕಾರಿಗಳು ತನ್ನ ಕರ್ತವ್ಯಲೋಪದ ಮೇಲೆ ಆರೋಪ ತಂದರೆ ಮಂತ್ರಿಗಳ ತಂದೆ ಕಾಪಾಡುವುದಿಲ್ಲ ಎಂಬ ಪ್ರಜ್ಞೆಯು ಬಂದಿತು. ಆದ್ದರಿಂದ ಉಪಾಯವಾಗಿ ಯಜಮಾನರೇ ನಿಮ್ಮ ಅಪ್ಪಣೆಯಂತೆಯೇ ಆಗಲಿ. ಊರ ಜನಕ್ಕೆ ನಾನು ಸಿಪಾಯಿ ಕಳಿಸುತ್ತೇನೆ ಎಂದರು.

ಹತ್ತಿರವಿದ್ದ ಕಾನ್‌ಸ್ಟೇಬಲ್‌ಗಳಲ್ಲಿ ನಾಲ್ವರನ್ನು ಕರೆದುಕೊಂಡು ಹೋಗಿ ಬೆಟ್ಟಯ್ಯನವರ ಮಗ ಮೋಹನದಾಸನನ್ನು ಹಿಡಿದು ಅರೆಸ್ಟ್ ಮಾಡ್ಕಂಡು ತನ್ನಿ ಎಂದು ಓಡಿ ಹೋಗಿ ಎಂದರು. ತಾವು

ಕಾನ್‌ಸ್ಟೇಬಲ್ಲುಗಳನ್ನು ಕಳಿಸುತ್ತಿರುವುದು ಒಬ್ಬ ಎಂ.ಎಲ್.ಎ. ಮನೆಗೆ ಎಂಬ ನೆನಪಾಯಿತು. ಆದರೆ ಮತ್ತೆ ಪೇಚಿನಲ್ಲಿ ಸಿಕ್ಕಿಬಿದ್ದರು. ಆದರೂ ಅವರು ಬಲಿಷ್ಠರಾದ ಎಂ.ಎಲ್.ಎ. ಆಗಿರಲಿಲ್ಲ. ಆಕಸ್ಮಿಕವಾಗಿ ತಮ್ಮ ಮೇಲೆ ತಕರಾರ್ ಮಾಡಿದರೂ ದೊಡ್ಡ ಪಟೇಲರ ಮರೆಹೊಕ್ಕು ಮಂತ್ರಿಗಳ ಮೂಲಕ ಸರಿಪಡಿಸಿಕೊಂಡರೆ ಆಗುತ್ತದೆ. ಒಂದು ವರ್ಗ ಎಂದು ಸಮಾದಾನ ಪಟ್ಟರು. ಸ್ವಲ್ಪ ಹೊತ್ತಿನಲ್ಲಿ ಹೆಣವನ್ನು ಕುಯ್ದು ಮುಗಿಯಿತು ವಿಷ ಮೊದಲಾಗಿ ಕಾಣುವುದಿಲ್ಲ. ಮೀನುಗಳು ಕಿತ್ತು ತಿಂದಿರುವುದನ್ನು ಬಿಟ್ಟರೆ ಶರೀರಕ್ಕೆ ಯಾವ ತೊಂದರೆಯು ಆಗಿಲ್ಲ. ಹೊಟ್ಟೆಗೆ ಕಟ್ಟಿರುವ ಕಲ್ಲಿನ ಸಮೇತ ನೀರಿನಲ್ಲಿ ಮುಳುಗಿರುವುದೇ ಸಾವಿನ ಕಾರಣವೆಂದು ವೈದ್ಯರು ಹೇಳಿದರು. ಆಮೇಲೆ ಕೋರ್ಟ್ ನಿಶ್ಚಯಿಸಬೇಕು ವೆಂಕಟೇಶನ ಮನಸ್ಸು ದುಃಖದಿಂದ ಬಿಕ್ಕಿ ಬಿಕ್ಕಿ ಅತ್ತಾಗ ಎಲ್ಲರೂ ಸೇರಿ ಸಮಾಧಾನ ಹೇಳಿದರು.

ವೆಂಕಟರಮಣಯ್ಯನವರನ್ನು ಅವರ ತೋಟದ ಅರಳೀ ಮರದ ಕೇಳಗೆ ಶವ ಸಂಸ್ಕಾರ ಮಾಡಿದರು. ಸೇರಿದ ಗುಂಪು ಆಸ್ಪತ್ರೆಯಿಂದ ಚದುರಲಿಲ್ಲ ಅವನಿಗೆ ಶಿಕ್ಷೆಯಾಗುತ್ತದೆ ಎಂಬುದನ್ನು ದೊಡ್ಡಗೌಡರು ಹೇಳಿದರು. ಈಗ ಹೊಲೆ ಮಾದಿಗರ ರಾಜ್ಯವಾಗುತ್ತಿದೆ. ಹೀಗೆಯೇ ಬಿಟ್ಟರೆ ಧರ್ಮವು ಸಹ ಉಳಿಯುವುದಿಲ್ಲ ಎಂಬ ಎಚ್ಚರಿಕೆಯನ್ನು ಕೊಟ್ಟರು. ಕುಪ್ಪಣಯ್ಯಂಗಾರರಿಂದ ಹಿಡಿದು ಮುಮ್ತಾಜ್ ಸಾಬಿಯ ತನಕ ಎಲ್ಲರೂ ನಡೆದಿರುವ ಪಾಖಂಡಿ ಕೃತ್ಯವನ್ನು ಖಂಡಿಸಿ ಮಾತನಾಡಿದರು. ಪೋಲಿಸರ ಸಂಗಡ ಬೆಟ್ಟಯ್ಯನವರು ಬಂದರು. ಮೋಹನದಾಸ ನಿನ್ನೆಯೇ ಊರಿಗೆ ಹೋದನಂತೆ ದೇವರ ಮೇಲೆ ಆಣೆ ಇಟ್ಟು ಹೇಳಿದ್ದಾರೆ. ಮಗ ಮನೆಯಲ್ಲಿ ತಮ್ಮ ಜೊತೆಯಲ್ಲಿ ಮಲಗಿದ್ದ ಎಂದು ಬೆಟ್ಟಯ್ಯ ಹೇಳಿಕೆ ಕೊಟ್ಟರು. ತಂದೆ ಸತ್ತ ಮೇಲೆ ಎಲ್ಲರೂ ಮೂಕವಿಸ್ಮತರಾಗಿ ದುಃಖದಲ್ಲಿದ್ದರು. ಆದರೂ ಬೆಟ್ಟಯ್ಯನವರು ಸತ್ಯಭಾಮಳ ಹತ್ತಿರ ಬಂದು ನೀನು ನಿಜವನ್ನು ಹೇಳಬೇಕು ಎಂದರು. ನನ್ಮಗ ನೀರಿನಾಗೆ ಮುಳುಗಿಸಿ ಸಾಯಿಸಿದ್ಧನೆಂದು ಕೇಸು ಮಾಡಿದ್ದಾರೆ, ಹತ್ತು ಹನ್ನೆಲ್ಡು ಜನ ಸಾಕ್ಷಿ ರುಜು ಮಾಡಿದ್ದಾರೆ, ದೊಡ್ಡಗೌಡರು ನೇಣುಗಟ್ಟುಸ್ತೀನಿ ಎಂದಿದ್ದರು. ನನ್ನ ಮಗ ಬಂಡಾಯಗಾರನಾದರೂ ಈ ಬಗೆಯ ಹೀನಕೃತ್ಯ ಮಾಡುವವನಲ್ಲವೆಂದು ಸಕಲ ದೇವತೆಗಳ ಮೇಲೆ ಆಣೆಯಿಟ್ಟು ಹೇಳಿದರು. ನೀವು ನಿಜ ನುಡಿಯಬೇಕು ಎಂದರು.

ಬೆಟ್ಟಯ್ಯನವರ ಜೊತೆಯಲ್ಲಿ ಪೊಲೀಸ್ ಸ್ಟೇಶನ್ ಹತ್ತಿರ ಹೋಗಿ ಎಲ್ಲಾ ವಿವರಗಳನ್ನು ತಿಳಿದಳು. ಹುಚ್ಚು ಹಿಡಿದ ಅಪ್ಪನನ್ನು ರೇಗಿಸಿದರೂ ತಾನೂ ಗಂಡಸಾಗಿದ್ದರೆ ಅವನಿಗೆ ಚಪ್ಪಲಿಯಲ್ಲಿ ಹೊಡೆಯಬೇಕಾಗಿತ್ತು. ಆದರೆ ನೀರಿನಲ್ಲಿ ಹಿಡಿದು ಮುಳುಗಿಸಿರುವುದಕ್ಕೆ ಒಪ್ಪಲಿಲ್ಲ. ಅಪ್ಪನ ಮೂಲಕ ಮೇಲು ಜಾತಿಗೆ ಅಪಮಾನ ಮಾಡುವುದು ಸಹ ಅವನ ಉದ್ದೇಶವಾಗಿತ್ತು. ಒಂದು ಕಾಗದದ ಹಾಳೆಯನ್ನು ಕೇಳಿ ತೆಗೆದುಕೊಂಡಳು. ಸತ್ಯಭಾಮಳು ತನಗೆ ಅನ್ನಿಸುದುದನ್ನು ಬರೆದು ರುಜು ಹಾಕಿ

ಕೊಟ್ಟಳು. ಅವರು ಯಾರ ವಿರುದ್ಧವೂ ಕೇಸ್ ಹಾಕುವ ಗೋಜಿಗೆ ಹೋಗಲಿಲ್ಲ. ವೆಂಕಟೇಶ ಸತ್ಯಭಾಮಳ ಹತ್ತಿರಕ್ಕೆ ಬಂದು ನೀನ್ಯಾಕೆ ಪೋಲೀಸ್ ಸ್ಟೇಶನ್‌ಗೆ ಹೋಗಿದೆ ಎಂದು ರೇಗಿದನು. ಊರ್ನೋರೆಲ್ಲ ಕುಂಕುಮ ಇಟ್ಕಳುವ ಹೆಂಗಸರು ತಾನೊಬ್ಬನೇ ಗಂಡಸು ಎಂದು ಹೇಳುತ್ತಾನೆ. ಅದಕ್ಕೆ ಸತ್ಯಭಾಮಳು ಹತ್ತು ಜನಗಳನ್ನು ಸೇರಿಸಿ ಪಂಚಾಯಿತಿಯನ್ನು ಮಾಡಿ ಹುಚ್ಚು ಹಿಡಿದಿದ್ದವರನ್ನು ಬೈಯ್ಯಬಹುದು. ಅಯೋಗ್ಯ ಅಂತ ಹೇಳಿ ದಂಡವನ್ನು ಹಾಕಿ ಆದರೆ ಕೋಲೆ ಮಾಡಿದ್ದಾನೆ ಎಂದು ಸುಳ್ಳು ಕೇಸು ಹಾಕುವುದು ಯಾವ ನ್ಯಾಯ ಎಂದಳು.

ವೆಂಕಟೇಶನು ನಿನ್ನ ಮದುವೆ ಮಾಡಬೇಕು ಎಂಬ ಆಸೆಯನ್ನು ಇಟ್ಟುಕೊಂಡು ಕೊರಗಿನಲ್ಲಿ ತಂದೆಯವರು ನೀರು ಪಾಲಾಗಿ ಸತ್ತನು ಎಂದು ಸತ್ಯಭಾಮಳಿಗೆ ಹೇಳಿದನು. ಜನರುಗಳು ಹೆಸರಿಡುವಾಗ ಜಾತಿ ಸೂಚಕದ ಜೊತೆಗೆ ಆ ಜಾತಿಯ ಸಾಮಾಜಿಕ ಮಟ್ಟವನ್ನು ತೋರಿಸುವುದು ಅಂದಿನ ನಿಯಮವಾಗಿತ್ತು. ಬ್ರಾಹ್ಮಣರ ಹೆಸರು ಮಂಗಲವನ್ನೂ, ಕ್ಷತ್ರಿಯನದು ಶಕ್ತಿಯನ್ನೂ, ವೈಶ್ಯನ ಅಂಕಿತವೂ ಸಂಪತ್ತನ್ನೂ, ಶೂದ್ರನದು ಜಿಗುಪ್ಸೆಯನ್ನು ಸೂಚಿಸುವಂತಿರಬೇಕು ಎಂಬ ಸೂತ್ರವನ್ನು ಮಾಡಿದ್ದರು. ಅದಲ್ಲದೆ ವಿಧಿಸಿದ್ದ ದಂಡ ನಿಯಮಗಳು ಸಹ ಜಾತಿಗನುಗುಣವಾಗಿದ್ದವು. ಒಂದೇ ರೀತಿಯ ಅಪರಾಧಕ್ಕೆ ಬೇರೆ ಬೇರೆ ಜಾತಿಯವರೆಗೆ ಬೇರೆ ಬೇರೆ ಶಿಕ್ಷೆಗಳು! ಬ್ರಾಹ್ಮಣ, ಕ್ಷತ್ರಿಯ ಮೊದಲಾಗಿ ಯಾರಾದರೂ ಗಂಡಸು ಶೂದ್ರ ಸ್ತ್ರೀಯನ್ನು ಬಲಾತ್ಕರಿಸಿದರೆ ಅವರು ಹತ್ತೋ ಇಪ್ಪತ್ತೋ ಪಣವನ್ನು ದಂಡಕೊಟ್ಟು ಮುಕ್ತರಾಗಬಹುದಿತ್ತು. ಆದರೆ ಶೂದ್ರನು ಮೇಲು ಜಾತಿಯ ಸ್ತ್ರೀಯನ್ನು ಹಿಡಿದು ಭೋಗಿಸಿದರೆ ಮರಣದಂಡನೆಯನ್ನೇ ಅನುಭವಿಸಬೇಕಾಗಿತ್ತು.

ತಿರುಮಲಾಪುರಲ್ಲಿ ನಡೆಯುವ ಜಾತಿಗಳ ಅಂತಸ್ತನ್ನು ತೀರ್ಮಾನಿಸುವ ಸಭೆ ತನಗೆ ಪ್ರತ್ಯಕ್ಷ ಇತಿಹಾಸವಾಗಿ ಸತ್ಯದ ಪ್ರಖರತೆ ನೀಡಬಹುದೆನಿಸಿ ಸತ್ಯ ಸಭೆಗೆ ಬರುತ್ತಾಳೆ. ಜಾತಿಗಳ ಒಳ ಪಂಗಡಗಳನ್ನು ನಮೂದಿಸಲಾಗಿತ್ತು. ಎಲ್ಲರ ಮನಸ್ಸಿನಲ್ಲಿಯೂ ತಾವೂ ಬ್ರಾಹ್ಮಣರಾಗಬೇಕೆಂಬ ಹೆಬ್ಬಯಕೆ ಇರುವುದರ ಅರಿವಾಗುತ್ತದೆ. ವಾಲ್ಮೀಕಿ ಮಹರ್ಷಿಗಳು ಮುಂಚೆ ಬೇಡರಾಗಿದ್ದರು. ಅವರ ವಂಶಜರಾದ ನಮ್ಮನ್ನು ಬೇಡ ಎಂಬ ಕೀಳು ಹೆಸರಿನಿಂದ ಕರೆದು ಇತರ ಮೇಲು ಜಾತಿಗಳವರು ಅವಮಾನ ಮಾಡುತ್ತಿದ್ದಾರೆ. ಆದರೆ ನಮ್ಮ ಜನಗಳೆಲ್ಲರೂ ವಾಲ್ಮೀಕಿ ಬ್ರಾಹ್ಮಣ ಎಂದು ಹೆಸರನ್ನು ಬರೆಸಬೇಕೆ ಹೊರತು ಬೇಡ ಎನ್ನಬಾರದು. ಸಮಾಜದಲ್ಲಿ ಮೇಲು ಜಾತಿಯವರು ಕುರುಬ ಹೆಸರಿಂದ ಕರೆದು ನಮ್ಮನ್ನು ದಡ್ಡರೆಂದು ಹಾಸ್ಯಕ್ಕೆ ಈಡಾಗಿದ್ದೇವೆ ಸಹ ವಾಸ್ತವವಾಗಿ ನಮ್ಮ ಮತದ ಹೆಸರು ಕಾಳಿದಾಸ ಮತ ಆಗಿರುವುದರಿಂದ ಈಗ ಆಗುವ ಜನಗಣತಿಯಲ್ಲಿ ಯಾರು ಕುರುಬ ಎಂದು ಬರೆಸದೆ ಕಾಳಿದಾಸ ಬ್ರಾಹ್ಮಣ ಎಂದೇ ಬರೆಸಬೇಕೆಂದಿದ್ದರು. ಇತರ ಜನಗಳು ಸಹ ಅಕ್ಕಸಾಲಿಗರು, ಆಚಾರಿಗಳು ಎಂಬ

ಹೀನಾಯದ ಹೆಸರಿನಿಂದ ಕರೆಯುವುದನ್ನು ಬೇಡ ಎಂದರು. ಈಗ ಆಗುವ ಜನಗಣತಿಯಲ್ಲಿ ಎಲ್ಲರೂ ವಿಶ್ವಕರ್ಮ ಬ್ರಾಹ್ಮಣ ಎಂಬ ಹೆಸರನ್ನು ಬರೆಸತಕ್ಕದ್ದು. ಕಸುಬು ಬಂದಾಗ ವಿಶ್ವಕರ್ಮ ಎಂದು ಬರೆಯಬೇಕೆ ವಿನಹ ಚಿನ್ನ ಬೆಳ್ಳಿ ಕುಲುಮೆ ಕುಟ್ಟುವುದು ಎಂದಾಗಲೀ ಬರಸಕೂಡದು ಎಂದರು.

ವೀರಶೈವ ಮತವನ್ನು ಬಸವಣ್ಣನವರು ಸ್ಥಾಪಿಸಿದರು. ನಮ್ಮ ನಮ್ಮಲ್ಲಿಯೇ ಒಡಕು ಹುಟ್ಟಿಕೊಂಡು ಪ್ರಾಚೀನ ಧರ್ಮವನ್ನು ನೊಣಬ, ಬಣಜಿಗ, ಬಿಳಿಮಗ್ಗ, ಶೆಟ್ಟಿ, ಜಂಗಮ ಎಂಬ ಒಳಪಂಗಡದಿಂದ ಕರೆಯಬಾರದು. ಜನಗಣತಿಯಲ್ಲಿ ಪ್ರತಿಯೊಬ್ಬರು ತಮ್ಮ ಮತವನ್ನು ಲಿಂಗಾಯತ ಅಥವಾ ವೀರಶೈವ ಎಂದು ಹೇಳಬೇಕೆ ಹೊರತು ಒಳಪಂಗಡವನ್ನು ಹೇಳಬಾರದು. ಮಂಡ್ಯಂ ಹೆಬ್ಬಾರ್ ಒಳಪಂಗಡವನ್ನು ಹೇಳಬಾರದೆಂದು ಬರೇ ಬ್ರಾಹ್ಮಣ ಎಂದು ಹಾಗೂ ಶ್ರೀವೈಷ್ಣವರು, ಶ್ರೀ ವೈಷ್ಣವ ಬ್ರಾಹ್ಮಣ ಎಂದು ಹೇಳಬೇಕೆ ಹೊರತು ಉಪಪಂಗಡವನ್ನು ಹೆಸರಿಸಬಾರದು. ಮೇಷ್ಟ್ರಯ್ಯ ಸರ್ಕಾರಿ ಲೆಕ್ಕದಲ್ಲಿ ಇದ್ದಂಗೆ ಬರೇತೀವಿ ಎಂದರು. ಆದರೆ ಜನರುಗಳು ಸಹ ಅಸಮಧಾನಗೊಂಡರು. ಮೇಲು ಸಕ್ಕರೆ ಎಂದು ಬರ್ಕಳ್ರೀ ಎಂದರೆ ಇಲ್ಲ ಉಪ್ಪಾರ್ರು ಅಂತ ಬರೀತೀವಿ ಎಂದರು. ನಮ್ಮ ಜಾತಿಗೆ ಅವಮಾನವಾಗುತ್ತದೆ. ವೆಂಕಟೇಶನು ನ್ಯಾಯ ನ್ಯಾಯ ಎಂದನು. ಅವರ ಗಣತಿ ಲೆಕ್ಕ ಹ್ಯಾಂಗಾರು ಇರಲಿ ನಾಡಿದ್ದು ಊರಿನ ದೊಡ್ಡಗೌಡರು ತೀರ್ಮಾನ ಮಾಡುತ್ತಾರೆ ಎಂದು ಒಪ್ಪಿದರು. ಮತಗಳ ನಾಯಕರುಗಳು ಬಂದು ಮತಗಳ ಮರ್ಯಾದೆಯನ್ನು ಕಾಪಾಡಪ್ಪ ಎಂದು ದೇವರನ್ನು ಬೇಡಿದರು. ಮಾರಮ್ಮನ ಹಬ್ಬದ ಸಂದರ್ಭದಲ್ಲಿ ಪ್ರತ್ಯಕ್ಷವಾಗಿ ಬಲಿಕೊಡುತ್ತಿದ್ದರೂ, ಈ ಬಲಿಯಲ್ಲಿ ಬ್ರಾಹ್ಮಣರೂ ಸಹ ನೈತಿಕವಾಗಿ ಭಾಗಿಗಳಾಗಿದ್ದಾರೆ. ಎಲ್ಲಾ ಕಡೆಯಲ್ಲಿಯು ಶೂದ್ರತ್ವವು ತುಂಬಿ ತುಳುಕುತ್ತಿದೆ. ಇಡೀ ಊರಿನಲ್ಲಿ ಒಬ್ಬರೂ ಬ್ರಾಹ್ಮಣರಿಲ್ಲವೆಂದು ನೊಂದುಕೊಂಡಳು.

ಮಾದಿಗರೊಬ್ಬರೆಲ್ಲಾ ಮಾಂಸವನ್ನು ಸೇವಿಸುವುದು ಉಳಿದ ಮತದವರು ತಿನ್ನುತ್ತಾರೆ. ಆದರೆ ಇತ್ತೀಚಿನ ದಿನಗಳಲ್ಲಿ ಬ್ರಾಹ್ಮಣರು ಸಹ ಸೇವನೆ ಮಾಡುವುದಕ್ಕೆ ಆರಂಭಿಸಿದ್ದಾರೆ. ಆದ್ದರಿಂದಲೇ ಅದರ ಧಾರಣೆಯು ಸಹ ಗಗನಕ್ಕೆ ಏರಿದೆ ಎಂದಾಕ್ಷಣ ಸತ್ಯಭಾಮಳು ಕುಪಿತಗೊಂಡಳು. ಸತ್ಯಭಾಮಳು ಹರಿಜನಾಂಗಕ್ಕೆ ಸಂಬಂಧ ಪಟ್ಟಂತೆ ಕ್ರಾಂತಿಯನ್ನು ಉಂಟುಮಾಡುವ ಪುಸ್ತಕವನ್ನು ಬರೆದುಕೊಟ್ಟಳು. ಶೂದ್ರನಾದ ಶ್ರೀನಿವಾಸನಿಗೂ ಮಾದಿಗನಾದ ಬೆಟ್ಟಯ್ಯನವರ ಮಗಳಾದ ಮೀರಾಳನ್ನು ಮದುವೆ ಮಾಡುವುದಕ್ಕೆ ಸತ್ಯಭಾಮಳು ಪ್ರಯತ್ನ ಮಾಡುತ್ತಾಳೆ. ಈ ವಿಚಾರದಲ್ಲಿ ನಿಮ್ಮ ತಂದೆ ತಾಯಿಗಳು ಒಪ್ಪಿಕೊಳ್ಳುತ್ತಾರೆಯೇ ಎಂದು ಕೇಳಿದಾಗ ಅವಳು ಕಷ್ಟ ಪಡುವ ಸ್ಥಿತಿಯಲ್ಲಿದ್ದಳು. ನಾನು ನಿನ್ನನ್ನು ಬಿಟ್ಟು ಬದುಕುವುದಿಲ್ಲ, "ನೀನು ಹೀಗೆ ಎದ್ದು ಹೊರಟು ಹೊದರೆ ನಾನು ಉಳಿಯುವುದಿಲ್ಲ, ನಿನ್ನ ಕೈ ಮುಟ್ಟಿ ನನಗೆ ಒಂದು ಔನ್ಸ ವಿಷ ಕೊಟ್ಟು ಹೊಗು"[೧೪] ಎಂದು ಆಗ್ರಹ ಮಾಡಿದನು.

ಮೀರಾಳ ಅಣ್ಣನಾದ ಮೋಹನದಾಸ ಮದುವೆಯ ವಿಚಾರವನ್ನು ತಲೆಗೂ ಸಹ ಹಾಕಿಕೊಳ್ಳಲಿಲ್ಲ. ಆದರೆ ತಂದೆ ತಾಯಿಯನ್ನು ಬಲವಂತದಿಂದ ಒಪ್ಪಿಸಬಹುದು ಎಂದು ಸತ್ಯಭಾಮಳಿಗೆ ಹೇಳಿದಳು. ಈ ವಿಷಯವನ್ನು ಸತ್ಯಭಾಮಳು ಮೋಹನದಾಸನಿಗೆ ಹೇಳಿದಾಗ ಅವನ ಮುಖವು ಕೆಂಪು ಬಣ್ಣಕ್ಕೆ ತಿರುಗಿತು. ತಂದೆಯನ್ನು ಮೀಸೆಬಿಟ್ಟ ಅಂತ ಕಂಬಕ್ಕೆ ಕಟ್ಟಿ ಹೊಡೆಸಿದನು. ಮತ್ತು ನಿಮ್ಮಣ್ಣನ ಹೊಟೆಲಿಗೆ ಕಾಫೀ ಕುಡಿಯುವುದಕ್ಕೆ ಹೋಗಿದ್ದಾಗ ನನ್ನ ತುಟಿ ಹರಿಯುವ ಹಾಗೆ ಲೋಟದಲ್ಲಿ ಹೊಡೆಸಿದ್ದನು ಎಂಬ ತೀರಸ್ಕಾರದ ಮಾತುಗಳನ್ನು ಆಡಿದನು. ಆದರೆ ಕೆಳಜಾತಿಯಿಂದ ಮೇಲ್ಜಾತಿಯವರು ತಂದು ಕೊಳ್ಳುವುದು ಮೊದಲಿಂದಲೂ ಬಂದಂತಹ ಪದ್ಧತಿಯಾಗಿತ್ತು. ಆದರೆ ಕೆಳಜಾತಿಯವರಿಗೆ ಕನ್ಯೆಯನ್ನು ಕೊಡುತ್ತಿರಲಿಲ್ಲ. ಹಾಗಾದರೆ ಮೋಹನದಾಸನು ಮೇಲು ಜಾತಿಯವರು ನಮಗೆ ಹೆಣ್ಣನ್ನು ಕೊಡುತ್ತಾರೆ ಎಂದಾಗ ಅಸಾದ್ಯವಾದದ್ದು ಹೆಣ್ಣು ಕೊಡುವುದಕ್ಕೆ ಒಪ್ಪುವುದಿಲ್ಲ. ಸತ್ಯಭಾಮಳು ಮೀರಾಳಿಗೆ ಹೋಮ ಹವನವನ್ನು ಮಾಡಿ ಯಜ್ಞೋಪವಿತ ಧಾರಣೆಯನ್ನು ಮಾಡಿದಳು. ಮಾದಿಗಿತ್ತಿಯಿಂದ ಬ್ರಾಹ್ಮಣತ್ವವನ್ನು ಮೀರಾಳು ಸ್ವೀಕರಿಸಿದಳು. ಅಂದಿನಿಂದ ಅವಳು ಬ್ರಾಹ್ಮಣಿತಿ ಆದಳು. ಮೋಹನದಾಸ ತಮ್ಮ ಜಾತಿಯ ಶೋಷಣೆಯ ಬಗೆಗೆ ಪ್ರತಿಭಟನೆ ವ್ಯಕ್ತಪಡಿಸುತ್ತಾನೆ. ಅವನ ಕ್ರಾಂತಿಯ ಮೂಲ ಮಂತ್ರಮೇಲ್ಜಾತಿಯವರಿಗೆ "ಒದ್ದು ಬುದ್ದಿ ಕಲಿಸಬೇಕೆಂಬುದು"[೧೫] ಅವನ ಗುರಿಯಾಗಿರುತ್ತದೆ. ಮೇಲ್ಜಾತಿಯವರ ಹೆಂಗಸರನ್ನು ತಮ್ಮ ಹೊಲಗಳಲ್ಲಿ ದುಡಿಸುವುದು, ಮೇಲ್ಜಾತಿಯವರು ತಮ್ಮ ಹೆಂಗಸರಿಗೆ ಮಾಡಿದ್ದನ್ನು ತಾವೂ ಅವರ ಹೆಂಗಸರಿಗೆ ಮಾಡಬೇಕು ಎನ್ನುತ್ತಾನೆ.

ದಲಿತ ಕ್ರಾಂತಿ ವೀರ ಮೋಹನದಾಸನ ಮುಖಂಡತ್ವದಲ್ಲಿ ಅವರ ಕೇರಿಯ ಜನರುಗಳು. ಏರಿಯ ಮೇಲಿಂದ ತಾಳದ ಶಬ್ದಮಾಡಿಕೊಂಡು "ರಘುಪತಿ ರಾಘವ ರಾಜಾರಾಮ್"[೧೬] ಭಜನೆ ಮಾಡುತ್ತ ಮೋಹನದಾಸ ಮತ್ತು ಅವನ ಹಿಂದೆ ಹತ್ತುಹದಿನೈದು ಯುವಕರು ಅವರ ಹಿಂದೆ ನೂರಾರು ಜನ ಗಂಡಸರು, ಹೆಂಗಸರು ಉದ್ದನೆಯ ಹಾದಿಯಲ್ಲಿ ಹಾವುಗಳಂತೆ ಇಳಿಯತೊಡಗಿದರು. ದೇವಸ್ಥಾನ ಪ್ರವೇಶಕ್ಕೆ ಎಲ್ಲರೂ ಹೋಗಬಹುದು ಎಂದು ಸರ್ಕಾರವೇ ತೀರ್ಮಾನಿಸಿದೆ. ನಮ್ಮ ಜನಗಳನ್ನು ದಿವಸಾನೂ ದೇವಸ್ಥಾನಕ್ಕೆ ಬಿಡಿ ಎಂದನು. ಅವರುಗಳು ಆಗುವುದಿಲ್ಲವೆಂದರು. ಆದರೆ ವೆಂಕಟೇಶನು ವರ್ಷಕ್ಕೆ ಒಂದು ದಿವಸ ಪ್ರವೇಶ ಮಾಡಿಸಬೇಕು. ಇದು ಸಾದ್ಯವಿಲ್ಲವೆಂದರು. ಗುಂಪಿನ ನಾಯಕರು "ನಾವು ದಿನ ಮುಂದಿನ ಬಾಗಿಲಿನಿಂದಲೇ ದೇವಸ್ಥಾನಕ್ಕೆ ಬರ್ತಿವಿ, ಅಷ್ಟೇ ಅಲ್ಲದೆ ಮುಂದೆ ನಾವು ಏಕೆ ದೇವಸ್ಥಾನಕ್ಕೆ ಪೂಜಾರಿಗಳಾಗಬಾರದು? ಅಂತ ಕೇಳ್ತಿವಿ"[೧೭] ಎಂದು ಖಂಡಿತವಾಗಿ ಹೇಳಿದನು. ಪ್ರತಿಯೊಬ್ಬರಿಗೂ ಸಮಾಜದಲ್ಲಿ ಸಮಾನತೆ ಸಿಗಬೇಕು. ಪೂಜೆಯ ಇನಾಮಿತಿಗೆ ಬಿಟ್ಟಿರುವ ಜಮೀನನ್ನು ಪಡೆಯುವುದಕ್ಕೆ ಹೊಂಚು ಹಾಕಿದ್ದಾನೆ ಘಾತಕ ಸೂಳೆಮಗ ವೆಂಕಟೇಶನ ಮನಸ್ಸು ತಕ್ಷಣ ಅನುಮಾನ

ಪಟ್ಟಿತು. ಆದರೂ ಆರ್ಚಕತ್ವ ಮತ್ತು ಯಜಮಾನಿಕೆಯನ್ನು ದಿಕ್ಕರಿಸುವುದಕ್ಕೆ ಬಂದಿದ್ದಾನೆ ಎಂಬ ಕೋಪವು ಬಂದಿತು.

ದೊಡ್ಡ ಯಜಮಾನರು "ಅದೇನು ಮಕ ನೋಡ್ತಿರಾ, ಹಿಡಿದುಕೊಂಡು ನೋವೆತ್ರಲಾ ಈ ನನ್ನ ಮಗಂಗೆ ಮೀಸೆ ಕಿತ್ತಾಕ್ರಲಾ ಮೊದ್ಲು"[೧೮] ಎಂದು ತಮ್ಮ ಕಡೆ ಜನರಿಗೆ ಆದೇಶವಿತ್ತರು. ಸಬ್‌ಇನ್ಸಪೆಕ್ಟರ್ "ಯಜಮಾನರೇ ಗಲಾಟೆಯಾಗಕೂಡದು"[೧೯] ಸರ್ಕಾರದ ಆದೇಶವಿದೆ ಎಂದರು. ಇತ್ತ ಮೋಹನದಾಸನು ಸಹ ತನ್ನ ಹಿಂಬಾಲಕರ ಕಡೆ ತಿರುಗಿ "ಏನ್ ನೋಡ್ತಿರಿ ಹಿಡಕೊಂಡ್ ಮಡಗ್ರಿ ನಾವೇನು ಶಿಖಂಡಿಗಳಲ್ಲ"[೨೦] ಎಂದು ಕೂಗಿ ಹೇಳಿದರು. ಅಷ್ಟು ಹೊತ್ತಿಗೆ ಸರಿಯಾಗಿ ಮಂತ್ರಿಗಳು ಬಂದರು. ಈ ನನ್ಮಕ್ಳನ್ನ ದೇವಸ್ಥಾನದ ಒಳಗೆ ಬಿಡುವುದಿಲ್ಲ ಎಂದು ವೀರ ನಿಶ್ಚಯವನ್ನು ಯಜಮಾನರು ನುಡಿದರು. "ಯಾವನೋ ಬೋಳಿಮಗ ನನ್ನ ಶಿಖಂಡಿ ಅಂದೋನು?"[೨೧] ಎಂದು ಅರಚಿಕೊಂಡು ಜನರ ಮೇಲೆ ನುಗ್ಗಿದನು. ಜನರೆಲ್ಲ ಸ್ಥಬ್ದರಾದರು. ಮೋಹನದಾಸ ಮತ್ತು ಸಂಗಡಿಗರು ನಾವೀಗ ದೇವಸ್ಥಾನದ ಒಳಗೆ ಮಂಗಳಾರತಿಗೆ ಹೋಗ್ತಿವಿ ಎಂದು ಸಬ್‌ಇನ್ಸಪೆಕ್ಟರಿಗೆ ಹೇಳಿದಾಗ ಗಲಾಟೆ ಬೇಡವೆಂದು ಸಮ್ಮತ್ತಿಸಿದರು. ಎಲ್ಲಾ ಜನಾಂಗದವರು ಸಹ ಪ್ರವೇಶ ಮಾಡಲಿ, ದೇವರೇ ತಕ್ಕ ಶಿಕ್ಷೆ ನೀಡುತ್ತಾನೆ. ಎಲ್ಲವನ್ನು ನೋಡುತ್ತಿರುವ ಸರ್ವಾಂತರ್ಯಾಮಿ ಅವನು ಎಂದರು.

ಮೋಹನದಾಸ ಹುಟ್ಟೂರಿನ ಗುಡಿಯನ್ನು ಪ್ರವೇಶಿಸಿದಾಗ ಪ್ರಚಂಡ ವ್ಯತ್ಯಾಸದ ಅನುಭವವಾಗುತ್ತದೆ ಮತ್ತು ಮೈ ಪುಳಕಿತವಾಗುತ್ತದೆ. ಗರ್ಭಗುಡಿಯಲ್ಲಿ ಎರಡೂಕಡೆ ಉರಿಯುತ್ತಿರುವ ದೀಪದ ನಡುವೆ ಕರೀಕಲ್ಲಿನ ವಿಗ್ರಹವನ್ನು ನೋಡುವುದಕ್ಕೆ ನಮ್ಮವರು ಶತಮಾನಗಳಿಂದ ಆಸೆಪಟ್ಟರೆ? ಎಂಬ ತಿರಸ್ಕಾರ ಭಾವನೆ ಮನಸ್ಸಿನಲ್ಲಿ ಹುಟ್ಟಿತು. ಹೊರಗೆ ಹೊರಟು ಹೋಗಬೇಕೆನಿಸಿತು. ಆದರೆ ಪೂರ್ತಿ ದಿನವೂ ಇರಬೇಕು. ಪ್ರತಿದಿನವೂ ನಮ್ಮ ಜನರು ದರ್ಶನಕ್ಕೆ ಬರುವಂತೆ ವ್ಯವಸ್ಥೆ ಮಾಡುವ ಮಧ್ಯದಲ್ಲಿ ಹೋಗಬಾರದು ಎಂದುಕೊಂಡು ನಿಂತನು. ಹಿಂತಿರುಗಿ ನೋಡಿದಾಗ ಗುಡಿಯೊಳಗೆಲ್ಲ ನಮ್ಮವರೇ ತುಂಬಿದ್ದಾರೆ ಎಂದು ಕೊಂಡನು. ಮೇಲು ಜಾತಿಯವರೆಲ್ಲರೂ ಹೊರಗೆ ಉಳಿದಿದ್ದಾರೆ ಅಂದರೆ ಮುಂದೆ ಅವರೆಲ್ಲ ಗುಡಿಗೆ ಬರುವುದನ್ನೇ ನಿಲ್ಲಿಸುತ್ತಾರೆಯೇ? ಬೇರೆ ಗುಡಿ ಕಟ್ಟಿಕೊಳ್ಳುತ್ತಾರೆಯೇ? ಹಾಗೆ ಮಾಡಿದರೆ ತನಗೆ ಸಿಕ್ಕುವುದು ಕಲ್ಲಿನ ದರ್ಶನ ಮಾತ್ರ ಇದರಲ್ಲೇನಿದೆ ಎಂದು ಯೋಚಿಸುತ್ತಿರುವಾಗ ಗಂಟೆಯ ಶಬ್ದವಾಯಿತು. ಮಂಗಳಾರತಿಯನ್ನು ಎಲ್ಲರು ತೆಗೆದುಕೊಂಡ ಮೇಲೆ ಕರಿಯ ಕಲ್ಲಿನ ವಿಗ್ರಹವನ್ನು ನೋಡುತ್ತಾ ನಿಂತ. ತಕ್ಷಣ ಮೋಹನದಾಸನಿಗೆ ಕಣ್ಣು ಕತ್ತಲೆಯಾದಂತೆನಿಸಿತು. ತನ್ನ ಇಡೀ ಶರೀರವು ತೂಗುವಂತೆ ಭಾಸವಾಯಿತು. ಅವನು ಕಣ್ಣು ಮುಚ್ಚಿಕೊಂಡು ತಲೆಸುತ್ತಿ ಬಂತು. ಕೆಳಗೆ ಕೂರಬೇಕೆನ್ನುವಷ್ಟರಲ್ಲಿ ದೊಪ್ಪನೆ ಕೆಳಗೆ ಬಿದ್ದುಬಿಟ್ಟ ಎಲ್ಲರೂ ಸಹ ಗಾಬರಿಯಿಂದ ನೋಡುತ್ತ ಅವನನ್ನು

ತಂದರು. ಏನಾಯ್ತು ಎಂದು ವೆಂಕಟೇಶ ಕೇಳಿದಾಗ ಬಿದ್ದು ಬಿಟ್ಟ ಎಂದರು. "ನಮ್ಮೂರ ದೇವರ ಸತ್ಯ ನಿಮಗೇನು ಗೊತ್ತು? ರಾವು ಬಡಿದಿದೆ. ಗುಡಿಯೊಳಗೆ ಹೋಗಬೇಡ ಎಂದರೂ ಯಾಕೆ ಹೋಗಿರಿ?"[೨೨] ಎಂದನು. ಅವನ ಹತ್ತಿರ ಎಲ್ಲರೂ ಸುತ್ತುಗಟ್ಟಿದರು.

ತಂದೆ ತಾಯಿಯನ್ನು ದೂರ ಕೂರಿಸಿ ಸತ್ಯಭಾಮಳು ಕೈನಾಡಿ ಮತ್ತು ಎಡಗೈಯನ್ನು ಎದೆಯ ಮೇಲೆ ಇಟ್ಟು ನೋಡಿದಳು. ಅಷ್ಟರಲ್ಲಿ ಸುತ್ತಕೂಡಿದವರಲ್ಲಿ ಒಬ್ಬರು "ದೇವರ ತೀರ್ಥ ತಂದು ಹಾಕಿ ಮುಂಡೇದು ಬದುಕ್ಕೊಳ್ಳಿ"[೨೩] ಎಂದರು. ಸತ್ಯಳೇ ಎದ್ದು ಗರ್ಭಗುಡಿಯೊಳಗೆ ಹೋಗಿ ದೇವರ ಮುಂದೆ ಇಟ್ಟಿದ್ದ ತಾಮ್ರದ ಚಂಬಿನಲ್ಲಿ ಮುಕ್ಕಾಲು ಭಾಗ ನೀರು ತುಂಬಿತ್ತು, ಹಿಡಿದು ಓಡಿ ಬಂದು ಬಲಗೈ ಹಾಕಿಕೊಂಡು ನೀರನ್ನು ಅವನ ತಲೆಗೆ ತಟ್ಟಿ ಮುಖಕ್ಕೆ ಸಿಂಪಡಿಸಿದಳು. ಜನರನ್ನೆಲ್ಲ ದೂರ ಕಳಿಸಿ ಗಾಳಿ ಬೀಸಿ ಎಂದು ಹೇಳಿದಳು. ತಲೆಗೆ ಮತ್ತೆ ನೀರನ್ನು ತಟ್ಟಿದಳು. ಐದು ನಿಮಿಷದಲ್ಲಿ ಮೋಹನದಾಸನು ಕಣ್ತೆರೆದನು. ತಾನು ಎಲ್ಲಿದ್ದೇನೆ ಎನ್ನುವ ಯೋಚನೆಯಾಗಿ ಅನುಮಾನವಾಯಿತು. ನಿತ್ಯವೂ ಪ್ರವೇಶದ ಕಾರ್ಯಕ್ರಮವು ಮರುದಿನದಿಂದ ನಿಂತು ಹೋಯಿತು.

ತಿರುಮಲಾಪುರವನ್ನು ಬಿಟ್ಟು ಕಣ್ಣಿಗೆ ಕಾಣದಂತೆ ಪತ್ತೆಯಾಗಿದ್ದಾನೆ. ರಾತ್ರಿ ಸುಮಾರು ಹತ್ತೂವರೆ ಗಂಟೆಯ ಹೊತ್ತಿನಲ್ಲಿ ಬಾಗಿಲು ತಟ್ಟಿದ ಶಬ್ದವಾಯಿತು. ಯಾರು? ಎಂದಾಗ ಮೋಹನದಾಸನು ನನ್ನನ್ನು ಕಂಡು ಸತ್ಯಭಾಮಳಿಗೆ ಆಶ್ಚರ್ಯ ಎಲ್ಲಿ ಹೋಗಿದ್ದೀರಿ ಇಷ್ಟು ದಿನ? ಎಂದು ಕೇಳಿದಳು. ಅದಕ್ಕೆ ಮೋಹನದಾಸನು ಭಾಷೆ ಕೊಡು ಎಂದಾಗ ಅವನೇ ಕೈನೀಡಿ ಅವಳ ಬಲಗೈಯನ್ನು ಹಿಡಿದು ಧ್ವನಿಯನ್ನು ತಗ್ಗಿಸಿ ಹೇಳಿದನು. "ನೀವು ಈಗಲೇ ಇಲ್ಲಿಂದ ಹೊರಟು ಹೋಗಿ, ಈ ಜಾಗದಿಂದ ಒಂದು ಫರ್ಲಾಂಗ್ ಮೇಲೆ, ಊರ ಕಡೆಗೆ ಹೋಗಬೇಕು. ನಿಮ್ಮ ಜೀವನಕ್ಕೆ ಅಪಾಯವಿದೆ. ಯಾಕೆ ಯಾರಿಂದ ಆದೀತು?"[೨೪] ಮೋಹನದಾಸನು ಕಳಕಳಿಯನ್ನು ನೋಡಿದರೆ ಅಪಾಯವಿರುವುದು ಸ್ಪಷ್ಟವಾಯಿತು. ನನ್ನ ಕೊಲೆ ಮಾಡಿಸುವ ಪ್ರಯತ್ನ ನಡೆದಿದೆಯೇ? ಯಾರು ಮಾಡಿಸಬೇಕು? ಮಂತ್ರಿಗಳೇನಾದರೂ ಹಂಚಿಕೆ ಹಾಕಿರಬಹುದೇ? ಅದರಲ್ಲಿ ನಂಬಿಕೆ ಬರುವುದಿಲ್ಲ ಯಾಕೆ ಹೆದರಬೇಕು ಎಂಬ ಧೈರ್ಯ ಹಠಗಳು ಮನಸ್ಸಿನಲ್ಲಿ ಹುಟ್ಟಿದವು. ಅವಳ ಕಿವಿಗಳ ಸುತ್ತಮುತ್ತ ಯಾರಾದರೂ ಸಪ್ಪಳವಾದೀತೇನೋ ಎಂದು ಚುರುಕಾಗಿ ಎಲ್ಲಾ ಕಡೆಯಲ್ಲೂ ಇತ್ತು ಅಪಾಯದ ಯಾವ ಸೂಚನೆಗಳೂ ಕಾಣಿಸಲಿಲ್ಲ.

ಸತ್ಯಭಾಮಳು ನನ್ನ ಧೈರ್ಯ ಪರೀಕ್ಷೆ ಮಾಡುವುದಕ್ಕೆ ಅವನಿಗೆ ಏನಾಗಬೇಕು ಎಂದುಕೊಂಡಳು. ಅಷ್ಟರಲ್ಲಿ ಢಂ ಢಂ ಎಂಬ ಸದ್ದು ಎಲ್ಲೋ ದೂರದಲ್ಲಿ ಕೇಳಿಸಿತು. ಅದೇ ಧ್ಯಾನದಲ್ಲಿ ಕಿವಿಯನ್ನು ಚುರುಕಾಗಿಟ್ಟುಕೊಂಡಿದ್ದರಿಂದ ಶಬ್ದವು ಕೇಳಿಸಿತು. ಇಲ್ಲದಿದ್ದರೆ ಅರಿವಾಗುತ್ತಿರಲಿಲ್ಲ ಏನಿರಬಹುದು ಈ

ಸದ್ದು? ಬಂದೂಕದ್ದೆ? ಯಾವ ಕಡೆ ಆಯಿತು ಎಂದು ಯೋಚಿಸಿದಳು. ಕೆರೆ ಕೋಡಿಯ ಮೊರೆತ ಹೆಚ್ಚಾಗುತ್ತಿತ್ತು. ಅನಂತರ ದಬ ದಬ ಎಂದು ನೀರು ಧುಮುಕುವಂತೆ ಕೇಳಲು ಮೊದಲಾಯಿತು. ಕೈಲಿದ್ದ ಕಾಗದದ ಕಟ್ಟನ್ನು ಹಿಡಿದೇ ಹೊರಗೆ ಬಂದಳು. ಮದ್ಯೆ ಹಳ್ಳವನ್ನು ತುಂಬಿಕೊಂಡು ಕೆಳಭಾಗದಲ್ಲಿ ಬೇಲಿ ಮುಳುಗಿ ನೀರು ಮೇಲ್ಭಾಗಕ್ಕೆ ಏರುತ್ತಿದೆ. ಎಲ್ಲೆಲ್ಲೂ ಜಲಮಯ. ಈ ಪ್ರವಾಹವು ಮನೆಯನ್ನು ಸುತ್ತುವರೆಯುತ್ತದೆ ಎನಿಸಿತು. ನೀರಿನಿಂದ ಪಾರಾಗುವುದಕ್ಕೆ ದಿಬ್ಬದ ಕಡೆಗೆ ಬರುವಾಗ ಸೆರಗು ಮತ್ತು ನೆರಿಗೆಗಳ ಭಾಗ ಹರಿದು ಜೂಲಾದುದು ಬೇಲಿಯಲ್ಲಿ ಉಳಿಯಿತು. ಕಾಲಿಗೆ ಬಿದಿರು ಮುಳ್ಳು ಚುಚ್ಚಿಕೊಂಡು ರಕ್ತ ಬರುತ್ತಿದ್ದರೂ ಸಹ ಲೆಕ್ಕಿಸದೇ ಅಪಾಯವಿಲ್ಲದ ಜಾಗವನ್ನು ಸೇರಿದಳು. ನುಗ್ಗಿದ ನೀರನ್ನು ನೇರವಾಗಿ ದೇವಸ್ಥಾನದ ಹಿಂಭಾಗದ ಗೋಡೆಯನ್ನೇ ಬಡಿಯುತ್ತಿರುವಂತೆ ಅಸ್ಪಷ್ಟವಾಗಿ ಕಾಣುತ್ತಿತ್ತು. ಊರಿನ ಮತ್ತು ಕೋಟೆಯ ಕಂದಕಗಳು ಕೆರೆಯ ನೀರಿಗಿಂತ ಎತ್ತರದಲ್ಲಿದ್ದರಿಂದ ಊರಿಗೆ ಯಾವ ತೊಂದರೆಯು ಇಲ್ಲ ಉಳಿದ ಜನರೊಡನೆ ಪೋಲಿಸರೂ ಓಡಾಡುತ್ತಿದ್ದರು. ಅಪಾಯವಿರುವುದರಿಂದ ನೀರಿನ ಹತ್ತಿರ ಹೋಗಬಾರದೆಂದು ಎಲ್ಲ ಜನರನ್ನು ತಡೆಯುತ್ತಿದ್ದರು. ನೀವು ಎಲ್ಲಿ ನೀರಲ್ಲಿ ಸಿಲುಕಿಕೊಂಡಿದ್ದೀಯಾ ಎಂದು ನಿಮ್ಮಣ್ಣ ಹುಡುಕುತ್ತಿದ್ದರು. ಸದ್ಯ ಇದ್ದೀರಲ್ಲ ಎಂದರು. ಮೇಲಿನಿಂದ ಬರುತ್ತಿದ್ದ ನೀರು ಸಮುದ್ರದ ಹಾಗೆ ಕಾಣುತ್ತಿದೆ. ಊರಿನ ಕೋಟೆಯ ತನಕ ಸುತ್ತಿ ಬರುತ್ತಿದ್ದ ನೀರಲ್ಲಿ ಗಾಡಿ, ಮರಗಳು, ಕೊಂಬೆ ತುಂಡುಗಳು, ಹುಲ್ಲು, ಜೋಳದ ಕಡ್ಡಿ, ಸತ್ತ ದನಗಳ ಜೊತೆಗೆ ಒಂದೆರಡು ಮನುಷ್ಯರ ಶವಗಳು ಕಾಣುತ್ತಿವೆ. ಪ್ರಳಯ ಎಂದರೆ ಎಲ್ಲೆಲ್ಲೂ ಜಲಮಯವಾಗಿ ಆವರಿಸುತ್ತದೆ ಎಂದುಕೊಂಡಿದ್ದಳು. ಮೋಹನದಾಸ ಮತ್ತು ಹೊನ್ನೇಶ ಡೈನಾಮೈಟ್ ಹಾಕಿ ಕೆರೆ ಏರಿಯನ್ನು ಹೊಡೆದರು ಎಂದು ಪೋಲಿಸಿನವರ ಹತ್ತಿರ ಒಪ್ಪಿಕೊಂಡನು. ಅವನೊಂದು ಇವನೊಂದು ಕಡೆ ಇರುವಾಗ ತಪ್ಪಿಸಿಕೊಳ್ಳುವುದರೊಳಗೆ ಏರಿ ಸಿಡಿದು ಮೋಹನದಾಸನ ಸಮೇತ ಕೊಚ್ಚಿಹೋದನು. ಈ ಕಡೆ ಇದ್ದದ್ದರಿಂದ ಹೊನ್ನೇಶ ಉಳಿದುಕೊಂಡನು.

ಹೊನ್ನೇಶನ ಹತ್ತಿರವಿದ್ದ ತಂತಿ, ಶೆಲ್ಲುಗಳನ್ನು ನೀರಿನೊಳಗೆ ಎಸೆಯಬೇಕು ಅನ್ನುವ ಗಾಬರಿಯಲ್ಲಿ ಹೊಳೆಯಲ್ಲಿಲ್ಲದ್ದರಿಂದ ಸಿಕ್ಕಿಕೊಂಡನು. ಸತ್ಯಭಾಮಳ ಮನಸ್ಸು ಉದ್ವಿಗ್ನವಾಯಿತು. ತನ್ನ ತಂದೆ ಸಾಯುವ ಹಿಂದಿನ ದಿನ ಅಂದಿದ್ದ ನೀರು, ಜಲಪ್ರಳಯ, ಮಾತುಗಳು ನೆನಪಿಗೆ ಬಂದವು. ಬಾನಿನಲ್ಲಿ ಚಂದ್ರನ ಬೆಳಕೇನೋ ಪ್ರಕಾಶಮಾನವಾಗಿದೆ. ಆದರೆ ಗುಡಿಯು ಶಿಖರ ಸಮೇತ ಕುಸಿದು ಬಿದ್ದಿದೆ. ಜನರೆಲ್ಲರೂ ಗುಡಿ ಹೋಯ್ತು ಎಂದು ಕೂಗುತ್ತಿದ್ದರು. ರವಿಕೆಯಲ್ಲಿ ತುರುಕಿಕೊಂಡಿದ್ದ ಕಾಗದದ ಕಟ್ಟುಗಳು ಸುರಕ್ಷಿತವಾಗಿತ್ತು. ಜನಿವಾರವನ್ನು ಕಿತ್ತು ಹಿಡಿದುಕೊಂಡು ನಿಂತಳು. ಸುತ್ತಿ ಉಂಡೆ ಮಾಡಿ ನೀರಿನೋಳಕ್ಕೆ ಎಸೆದು ಮೇಲ್ಭಾಗಕ್ಕೆ ತಿರುಗಿದಳು. ಕಣ್ಣು ನೀರಿನ ಪ್ರವಾಹವನ್ನು ದಿಟ್ಟಿಸುತ್ತಾ ನಿಂತಳು. ಸ್ವಲ್ಪ ಹೊತ್ತಿನಲ್ಲಿ

"ಧೀಯೋ ಯೋನಃ ಪ್ರಚೋದಯಾತ್"[೨೫] ಎಂಬ ಮಾತು ಮನಸ್ಸಿನ ಆಳದಿಂದ ತೇಲಿಬಂದು ನೀರಿನ ಮೊರೆತದಲ್ಲಿಯೂ ನಾಲಿಗೆ, ತುಟಿಗಳು ಅದನ್ನೇ ಉಚ್ಚರಿಸುತ್ತಿದ್ದವು. ಸತ್ಯ ಬದುಕುಳಿದರೂ ಎರಡನ್ನು ದಾಟದ ತ್ರಿಶಂಕುವಿನಲ್ಲಿ ಉಳಿದುಬಿಡುತ್ತಾಳೆ.

**ಕೊನೆ ಟಿಪ್ಪಣಿಗಳು**

೧) ದಾಟು ಎಸ್.ಎಲ್. ಭೈರಪ್ಪ — ಪುಟ ಸಂಖ್ಯೆ ೨೩, ೧
ಪುಟ ಸಂಖ್ಯೆ ೨೫, ೨

೨) ಯುಗ ಸಾಕ್ಷಿ ಭೈರಪ್ಪರ ಕೃತಿಗಳ ಅವಲೋಕನ,
ಎಲ್.ವಿ. ಶಾಂತಕುಮಾರಿ — ಪುಟ ಸಂಖ್ಯೆ ೧೮೨, ೩

೩) ದಾಟು, ಎಸ್.ಎಲ್. ಭೈರಪ್ಪ — ಪುಟ ಸಂಖ್ಯೆ ೧೦೬, ೪
ಪುಟ ಸಂಖ್ಯೆ ೧೨೭, ೫
ಪುಟ ಸಂಖ್ಯೆ ೧೩೧, ೬
ಪುಟ ಸಂಖ್ಯೆ ೧೬೧, ೭, ೮

೪) ಡಾ. ಎಸ್.ಎಲ್. ಭೈರಪ್ಪನವರ ಕಾದಂಬರಿಗಳೊಡನೆ
ಧರ್ಮ, ಕರ್ಮ, ಜಿಜ್ಞಾಸೆ. ಡಾ.ಕೆ.ಗೋಪಾಲ ಕೃಷ್ಣಯ್ಯ ಪುಟ ಸಂಖ್ಯೆ ೧೮೨, ೯,೧೦,೧೧,೧೨,೧೩
ಪುಟ ಸಂಖ್ಯೆ ೧೯೫, ೧೪

೫) ದಾಟು ಡಾ.ಎಸ್.ಎಲ್. ಭೈರಪ್ಪ — ಪುಟ ಸಂಖ್ಯೆ ೩೯೨, ೧೫

೬) ಡಾ. ಎಸ್.ಎಲ್. ಭೈರಪ್ಪನವರ ಕಾದಂಬರಿಗಳೊಡನೆ
ಧರ್ಮ,ಕರ್ಮ,ಜಿಜ್ಞಾಸೆ, ಡಾ. ಕೆ.ಗೋಪಾಲ ಕೃಷ್ಣಯ್ಯ ಪುಟ ಸಂಖ್ಯೆ ೨೦೧, ೧೬,೧೭,೧೮,೧೯,೨೦
ಪುಟ ಸಂಖ್ಯೆ ೨೦೨, ೨೧,೨೨,೨೩
ಪುಟ ಸಂಖ್ಯೆ ೨೦೩,೨೪

೭) ದಾಟು, ಡಾ.ಎಸ್.ಎಲ್. ಭೈರಪ್ಪ — ಪುಟ ಸಂಖ್ಯೆ ೪೧೨, ೨೫

***

ಅಧ್ಯಾಯ ೩

## ದಾಟು ಕಾದಂಬರಿಯಲ್ಲಿ ಸ್ತ್ರೀವಾದಿ ನೆಲೆಯ ಸ್ಥಿತ್ಯಂತರಗಳು

ದಾಟು ಕಾದಂಬರಿಯ ತುಂಬ ಸತ್ಯಭಾಮಳೇ ಕಾಣುತ್ತಿದ್ದರೂ, ತನ್ನದೇ ಆದ ಉದ್ದೇಶವನ್ನು ಹೊಂದಿ, ತನ್ನದೇ ಆದ ರೀತಿಯಲ್ಲಿ ಬದುಕುವುದಕ್ಕೆ ಇಷ್ಟಪಡುತ್ತಿದ್ದಳು. ಸಮಾಜದಲ್ಲಿ ಸಾಂಪ್ರದಾಯಿಕವಾಗಿ ಬೇರುಬಿಟ್ಟಿರುವ ಅಂಧಕಾರ, ಮೂಢನಂಬಿಕೆ, ಜಾತಿ, ಅಸ್ಪೃಶ್ಯತೆ ಮುಂತಾದವುಗಳಲ್ಲಿ ಸತ್ಯಭಾಮಳಿಗೆ ಅಸಮಾಧಾನವಿದ್ದರೂ ನಂಬುತ್ತಿರಲಿಲ್ಲ. ಸರಳವಾದ ಮಾದರಿಯಲ್ಲಿ ಪ್ರಶ್ನಿಸುವ ಸ್ವಭಾವವನ್ನು ಹೊಂದಿದ್ದಳು. ಎಲ್ಲಾ ಜನರನ್ನು ಸಹ ಸಮಾನತೆಯಿಂದ, ಪ್ರೀತಿಯಿಂದ ಕಾಣುತ್ತಿದ್ದಳು. ತನ್ನನ್ನು ದ್ವೇಷಿಸಿದ್ದರೂ ಸಹ ಅವರನ್ನು ಚೆನ್ನಾಗಿ ಮಾತನಾಡಿಸಿ ತನ್ನಿಂದ ಬೇಕಾದ ಸಹಾಯವನ್ನು ಮಾಡುವಳು. ಜನರುಗಳು ಕೆಟ್ಟ ದಾರಿಯಲ್ಲಿ ಹೋಗುತ್ತಿದ್ದರೂ ಸಹ ಒಳ್ಳೆಯ ದಾರಿಯಲ್ಲಿ ತರಲು, ಸಮಾಜಕ್ಕೆ ಒಳ್ಳೆಯ ಹೆಸರನ್ನು ಕೊಡಬೇಕು ಎಂದು ಸದಾ ಉತ್ಸಾಹದಲ್ಲಿದ್ದಳು. ಸತ್ಯಭಾಮಳು ಬೇರೆಯವರು ಸಂತೋಷವಾಗಿದ್ದರೂ ತಾನೂ ಸಹ ಸಂತೋಷವಾಗಿದ್ದೇನೆ ಎಂಬ ಭಾವನೆಯನ್ನು ಹೊಂದಿದ್ದಳು. ಹೊಲದಲ್ಲಿಯೂ ಸಹ ಶ್ರಮವಹಿಸಿ ಕೆಲಸವನ್ನು ಮಾಡಿ ಉತ್ತು, ಬಿತ್ತಿ ಬೆಳೆಯನ್ನು ತೆಗೆದವಳು ಮತ್ತು ಧೈರ್ಯವುಳ್ಳವಳಾಗಿದ್ದಳು. ಬದುಕಿನ ಜೀವನದಲ್ಲಿ ಏನೇ ಕಷ್ಟಗಳು ಬಂದರೂ ಅದನ್ನು ನಿಭಾಯಿಸುವ ಶಕ್ತಿ ಮತ್ತು ಯುಕ್ತಿಯನ್ನು ಹೊಂದಿರುವ ಏಕೈಕ ಮಹಿಳೆ. ಪ್ರೀತಿಯ ವ್ಯಾಮೋಹಕ್ಕೆ ಸಿಲುಕಿ ಮದುವೆಯಾಗಬೇಕೆನ್ನುವ ಆಸೆಯನ್ನು ಹೊಂದಿದ್ದರೂ ಸಹ ಅದರ ಮೋಹಕ್ಕೆ ಸತ್ಯಭಾಮಳು ಬಲಿಯಾಗುವುದಿಲ್ಲ. ಇವಳಿಗೆ ಮೋಸಮಾಡಿದವರನ್ನು ಸಹ ಒಳ್ಳೆಯ ಮಾತುಗಳನ್ನಾಡಿ ಅವರ ಮನಸನ್ನು ಗೆಲ್ಲುವ ಹೃದಯವನ್ನು ಹೊಂದಿದವಳು.

ಧೀರ ವನಿತೆಯಾಗಿ ಯಾವ ಕೆಲಸದಲ್ಲಿ ಜಗ್ಗದೇ ಅನುಭವವನ್ನು ಸಂಪಾದಿಸಿರುವ ಮಹಿಳೆಯಾಗಿ ಕಾದಂಬರಿಯಲ್ಲಿ ಕಂಡುಬರುತ್ತಾಳೆ. ಸತ್ಯಭಾಮಾ ನಾಯಕಿಯಾಗಿದ್ದರೂ ಸಹ ಎಂ.ಎ. ಇತಿಹಾಸನ್ನು ಮಾಡಿರುವ ವೆಂಕಟರಮಣಯ್ಯನವರ ಮಗಳಾಗಿ ಕಂಡುಬರುತ್ತಾಳೆ. ತಂದೆಯವರು ಮಗಳಿಗೆ ಗಂಡು ಹುಡುಕುವ ವಿಧಾನ ಆ ಮಟ್ಟದ ಜನಗಳೊಡನೆ ವ್ಯವಹರಿಸುವ ರೀತಿ ಗೊತ್ತಿರುವುದಿಲ್ಲ. ತಾಯಿ ಇಲ್ಲದೇ ಬೆಳೆಯುವ ಹೆಣ್ಣುಮಗಳು ಸಹ ಗಂಡಸರ ಹಾಗೆ ಆಗಿಬಿಡುತ್ತಾರೆನೋ ಎಂದು ಆದರೆ ತಂದೆಯವರು ತಮ್ಮಲ್ಲಿಯೇ ಯೋಚಿಸುತ್ತಾರೆ. ಆದರೆ ಒಬ್ಬ ತಮ್ಮ ಮನೆತನದವನ ಕೈಲಿಟ್ಟು ಧಾರೆಯೆರೆದು ಕೊಟ್ಟರೆ ಸಾಕು ಜವಾಬ್ದಾರಿ ತಪ್ಪಿತು. ಆಮೇಲೆ ಏನಾದರೂ ಮಾಡಲಿ ಎಂದರು. ನಾನು ಶ್ರೀನಿವಾಸನನ್ನು ಮದುವೆಯಾಗುವುದಾಗಿಯೂ ಅಲ್ಲಿಂದಲೇ ಆಶೀರ್ವದಿಸಬೇಕೆಂದು ಕಾಗದದಲ್ಲಿ ಬರೆದಿದ್ದಳು. ತಂಗಿಯು ತನ್ನ ಮಾತು ಕೇಳುವುದಿಲ್ಲ, ತನ್ನ ಮನಸ್ಸಿಗೆ ಬಂದದ್ದೇ ಆಗಬೇಕು ಚಿಕ್ಕವಯಸ್ಸಿನಿಂದಲೇ ಕಲಿತ ಹಟ ತಾಯಿ ಇಲ್ಲದ ಹೆಣ್ಣು ಹುಡುಗಿ ಅಂತ ಅಪ್ಪನೇ ಹೇಳಿದ. ಇಲ್ಲದಿದ್ದರೇ ಹಟ ಬೆಳೆತಿರಲಿಲ್ಲ. ಹೆಣ್ಣು ಹುಡುಗಿಯಂತ ಹಠ? ಅದು ಗಂಡಸಿಗಿರಬೇಕಾದದ್ದು ಎಂದರು. ಸತ್ಯಭಾಮಳ ಮುಖವು ತಂದೆಯನ್ನು ಕಂಡದ್ದಕ್ಕೂ ಅಥವಾ ಮತ್ತೆ ಯಾವ ಕಾರಣಕ್ಕೂ ಸ್ವಲ್ಪ ಮಂಕಾಗಿದ್ದರೂ ಅವಳು ಪ್ರಜ್ಞಾಪೂರ್ವಕ ಪ್ರಯತ್ನದಿಂದ ಗೆಲುವನ್ನು ಸಾಧಿಸುವಂತೆ ಕಾಣುತ್ತಿದ್ದಳು. ಬೆಟ್ಟಯ್ಯನವರ ಜೊತೆಯಲ್ಲಿಯೇ ಬಂದಳು.

ಸತ್ಯಭಾಮಾ ಹತ್ತಿರ ಬಂದು ಈಗ ಬಂದಿಯಾ ಅಪ್ಪಾ? ಎಂದು ಕೇಳಿದರೂ ಮಾತನಾಡಲಿಲ್ಲ. ಅವಳೇ ರೂಮಿಗೆ ಹೋಗೋಣ ನಡೀರಿ ಎಂದು ಮುಂದೆ ಹೆಜ್ಜೆ ಹಾಕಿದಳು. ಇವರು ತಮ್ಮ ಹೆಜ್ಜೆಯನ್ನು ಹಾಕಿದರೂ ಹಂಗಾರೆ ನಾನು ಹೊರಡಲಾ? ಎಂದು ಬೆಟ್ಟಯ್ಯನವರು ಮಾತನಾಡಿದ್ದಕ್ಕೆ ಬನ್ನಿ ನನ್ನ ರೂಂ ನೋಡಿಕೊಂಡು ಹೋಗುರಂತೆ ಎಂದು ಕರೆದಳು. ಮಗಳ ಆಹ್ವಾನಕ್ಕಿಂತ ನೀನು ಬಾರಯ್ಯ ಎಂದು ಸ್ವಾಮಿಗಳು ಕರೆದರು. ಕಾಲೇಜಿಗೆ ಹತ್ತಿರವಾಗುವ ಹಾಗೆ ಸಣ್ಣ ಬೀದಿಯಲ್ಲಿ ಮಹಡಿಯ ಮೇಲೆ ಅವಳ ರೂಂನಲ್ಲಿ ಮಂಚ, ಮೇಜು, ಕುರ್ಚಿಗಳಿದ್ದವು. ಹಾಸಿಗೆ ಬಟ್ಟೆ ಬರೆ ಮೊದಲಾಗಿ ಇನ್ನೂ ಏನೋ ಹೆಚ್ಚು ಮಾಡಿಕೊಂಡಿರಲಿಲ್ಲ. ಬೆಟ್ಟಯ್ಯನವರು ರೂಂನ ಬಳಿಗೆ ಬರಲಿಲ್ಲ. ಹೊರಗೆ ಬಿಸಿಲಿನಲ್ಲಿಯೇ ನಿಂತರು. ಯಜಮಾನರು ರೂಂಗೆ ಬಂದದ್ದೆ ತಡ ಅವಳ ಕಾಗದವನ್ನು ತೆಗೆದು ಮಂಚದ ಮೇಲೆ ಎಸೆದು ಇದೇನು ಬರೆದಿರೋದು? ಎಂದು ಕೇಳಿದರು. ಅವಳು ಉತ್ತರವನ್ನು ಹೇಳಲಿಲ್ಲ. ಮುಖವನ್ನು ತಂದೆಗೆ ತೋರಿಸದೇ ಬೇರೆ ಕಡೆ ತಿರುಗಿ ನಿಂತಳು. ಇದೇನು ಬರೆದಿರೋದು ಬೊಗುಳೇ ಎಂದು ಜೋರಾಗಿ ಮಾತನಾಡಿದರು. ನಿಧಾನವಾಗಿ ಮಾತನಾಡು ಪಟ್ಟಣದಲ್ಲಿ ಹತ್ತಿರ ಹತ್ತಿರ ಮನೆಗಳಿವೆ. ಈ ಮಹಡಿ ಮೇಲೆ ಇನ್ನೊಂದು ಸಂಸಾರ ಇದೆ ಎಂದಳು. ಆದರೆ ನೀನು ಮಾಡುವ ಕೆಲಸಕ್ಕೆ ಮರ್ಯಾದೆಯೊಂದು ಕೇಡು ಹೊಲೆಮುಂಡೆ ಎಂದು ಬಾಗಿದರು. ಒಳ ಬಾಗಿಲಿನಲ್ಲಿದ್ದ ತಮ್ಮ ಚಪ್ಪಲಿಗಳಲ್ಲಿ ಒಂದನ್ನು ತೆಗೆದುಕೊಂಡು

ತನ್ನ ಮಗಳೆನ್ನದೇ ಅವಳ ನೆತ್ತಿ, ಬೆನ್ನು, ಭುಜಗಳ ಮೇಲೆ ಬಾರಿಸಿಬಿಟ್ಟರು. ಮಗಳು ಮಾತ್ರ ಸ್ವಲ್ಪವೂ ವಿರೋಧಿಸದೇ ತನ್ನನ್ನು ತಾನು ಪೂರ್ತಿಯಾಗಿ, ಅವರು ಕೊಡುವಂತಹ ಶಿಕ್ಷೆಗೆ ಸಮರ್ಪಿಸಿಕೊಂಡು ತಲೆಬಾಗಿ ನಿಂತಳು.

ವೆಂಕಟರಮಣಯ್ಯನವರು ಮಾತಾಡೇ ಎಂದು ಕರೆದರೂ, ತುಟಿ ಪಿಟಕ್ ಎನ್ನಲಿಲ್ಲ. ಅವಳ ಭುಜ, ಬೆನ್ನುಗಳಲ್ಲಿ ಸಣ್ಣಗೆ ರಕ್ತ ಬಂದು ರವಿಕೆ ಮತ್ತು ಸೀರೆಯ ಸೆರಗು ನೆನೆಯುತ್ತಿತ್ತು. ಬೆಟ್ಟಯ್ಯನವರು ಹೊಡೆಯಬೇಡವೆಂದರೂ ಸಹ ಆವೇಶ ಬಂದವರಂತೆ ಬಾಗಿ, ಇನ್ನೊಂದು ಎಕ್ಕಡವನ್ನು ಕೈಗೆ ತೆಗೆದುಕೊಂಡು ಎರಡೂ ಕೈಗಳಿಂದ ಹೊಡೆಯುವುದಕ್ಕೆ ಪ್ರಾರಂಭಿಸಿದರು. ಮಗಳ ಭುಜದಿಂದ ಇನ್ನೂ ಹೆಚ್ಚು ರಕ್ತ ಹರಿಯಲು ಪ್ರಾರಂಭವಾಯಿತು. ಅಷ್ಟರಲ್ಲಿ ಮಹಡಿಯ ಮೇಲಿದ್ದ ಸಂಸಾರದ ಹೆಂಗಸು ಓಡಿ ಬಂದಳು, ಬೆಟ್ಟಯ್ಯನವರು ಅಮ್ಮಾ ಒಳಗೆ ಹೋಗಿ ಬಿಡಿಸಿಕೊಳ್ಳಿ ಎಂದು ಆಕೆಗೆ ಅಂಗಲಾಚಿದರು. ಬಿಡಿಸಿಕೊಳ್ಳದಿದ್ದರೆ ಆ ಹುಡುಗಿ ಉಳಿಯುವುದಿಲ್ಲವೆಂದು ಭಯವಾಯಿತು. ಆದರೆ ಅಷ್ಟರಲ್ಲಿ ಅವಳ ತಂದೆಯೇ ಇದ್ದಕ್ಕಿದ್ದ ಹಾಗೆ ಕೆಳಗೆ ಬಿದ್ದು ಬಿಟ್ಟರು. ಅವರಿಗೆ ಪ್ರಜ್ಞೆ ತಪ್ಪಿದೆ ಎಂದು ಬೆಟ್ಟಯ್ಯನವರಿಗೆ ಸ್ಪಷ್ಟವಾಯಿತು. ಅವರ ಹೊಡೆತಕ್ಕೆ ಬೆನ್ನು ಕೊಟ್ಟು ನಿಂತಿದ್ದ ಸತ್ಯಭಾಮಳಿಗೆ ಏನೂ ತಿಳಿಯಲಿಲ್ಲ. ಆದರೂ ಬೆಟ್ಟಯ್ಯನವರು ಅಯ್ಯಾರು ಪ್ರಜ್ಞೆ ತಪ್ಪಿ ಬಿದ್ದಿದ್ದಾರೆ ತಿರುಗಿ ನೋಡವ್ವ ಎಂದಾಗ ತಿರುಗಿ ನೋಡಿದಳು. ಕಿಟಕಿಯ ಗೂಡಿನಲ್ಲಿ ಗಾಜಿನ ಜಾರಡಿಯಲ್ಲಿದ್ದ ನೀರನ್ನು ತೆಗೆದುಕೊಂಡು ಅವಳು ಬೇಗ ತಂದೆಯ ತಲೆಗೆ ತಟ್ಟಿದಳು. ಮೇಜಿನ ಮೇಲಿದ್ದ ಬರೆಯುವ ರಟ್ಟಿನಿಂದ ಗಾಳಿ ಬೀಸಿದಳು. ಪಕ್ಕದಲ್ಲಿದ್ದ ಹೆಂಗಸು ಹೊಸಲಿಗೆ ಬಂದು ಯಾವನ್ರೀ ಇವನು ಕೈಸೇದಿ ಹೋಗ ನಿಮಗ ಹೀಗೆ ಹೊಡೆದಿದ್ದಾನೆ. ಮೈ ಎಲ್ಲಾ ರಕ್ತ ಬರುತ್ತಿದೆ ಎಂದಾಗ ತಂದೆಯವರು ಕೋಪಕ್ಕೆ ಗುರಿಯಾಗಿದ್ದಾರೆ. ಸಿಟ್ಟಿನ ಸ್ವಭಾವದವರು. ನೀವು ನಿಮ್ಮ ಮನೆಗೆ ನಡೀರಿ ಸತ್ಯಭಾಮಳು ಎಂದಳು. ತನಗೆ ಅಪಮಾನವಾದಂತೆ ಆಕೆ ಸರಕ್ಕನೆ ತಿರುಗಿ ಹೋದಳು.

ಸತ್ಯಭಾಮಳು ಯಾರಾದರೂ ವೈದ್ಯರನ್ನು ಕರೆದುಕೊಂಡು ಬನ್ನಿ ಎಂದಳು. ಒಂದೆರಡು ನಿಮಿಷ ನಿಲ್ಲಿ, ನೀರು ತಟ್ಟಿ ತಲೆಯನ್ನು ನಿಧಾನವಾಗಿ ಎತ್ತುಕೊಂಡು ತನ್ನ ತೊಡೆಯ ಮೇಲಿಟ್ಟುಕೊಂಡಳು. ಗಾಳಿ ಬೀಸಿದರು. ಯಜಮಾನರಿಗೆ ಪ್ರಜ್ಞೆ ಬಂದು ಕಣ್ಣು ಬಿಟ್ಟರು. ಹಿಂತಿರುಗಿ ಮಗಳನ್ನು ನೋಡಿದರು. ಅವಳು ತಲೆ ತಗ್ಗಿಸಿ ಕುಳಿತಿದ್ದಾಳೆ ಭುಜ, ತೋಳುಗಳ ಮೇಲೆಲ್ಲಾ ರಕ್ತವು ಕಪ್ಪಗೆ ಹೆಪ್ಪುಗಟ್ಟಿದಂತೆ ಆಗಿದೆ. ಶ್ರೀನಿವಾಸನನ್ನು ವಿವಾಹವಾಗುತ್ತೇನೆ ಎಂದು ಒಪ್ಪಿಕೊಂಡಳು. ನಿಮಗೆ ಇದರಿಂದ ಅಸಮಾಧಾನವಾದರೆ ಊರಿಗೆ ಬರುವುದಿಲ್ಲ, ಬಂದರೂ ಸಹ ನನ್ನನ್ನು ಅಡುಗೆ ಮನೆ, ದೇವರ ಮನೆಗೆ ಸೇರಿಸಬೇಡಿ. ಆದರೆ, ಊರಿನ ನಿಮ್ಮ ಮತದವರು ನಿಮಗೆ ಬಹಿಷ್ಕಾರ ಹಾಕುವುದು ಬೇಡ. ತಲಾಂತರದಿಂದ ಬಂದ ದೇವಸ್ಥಾನದ ಪೂಜೆ ಮತ್ತು ಇನಾಮತಿ ಜಮೀನು ತಪ್ಪಿ ಹೋಗುವುದು ಬೇಡ. ವರ್ಷಕ್ಕೆ ಒಂದು

ಸಲವಾದರೂ ಬೆಂಗಳೂರಿಗೆ ಬನ್ನಿ. ಕಾಲನ್ನೂ ಸಹ ಮುಟ್ಟಿ ಮೈಲಿಗೆ ಮಾಡದೆ ನೆಲಕ್ಕೆ ಬಗ್ಗಿ ನಮಸ್ಕರಿಸುತ್ತೇನೆ. ಆಗ ನನಗೆ ಆಶೀರ್ವದಿಸಿ. ಸತ್ಯಭಾಮಳು ತಂದೆಯನ್ನು ಹುಡುಕಿಕೊಂಡು ತೋಟಕ್ಕೆ ಹೋಗಿದ್ದಾಗ ಅಲ್ಲಿ ಇರಲಿಲ್ಲ. ಮಾತಂಗಿ ತೋಟದಲ್ಲಿ ಸೊಗಿ ಕುರುಂಬಾಳೆಯನ್ನು ಕಟ್ಟುತ್ತಿದ್ದಳು. ನನ್ನನ್ನು ಮಾತನಾಡಿಸಿದಳು. ಆದರೆ ಮಾತಂಗಿಯ ಹತ್ತಿರ ನಿಂತದ್ದು ನೋಡಿದರು. ದಾರಿಯಲ್ಲಿ ಬರುತ್ತಿದ್ದ ಯಾವುದೋ ಊರಿನವರು ತೋಟದ ಯಜಮಾನತಿ ಎಂದು ತಿಳಿದುಕೊಂಡು ಕುಡಿಯುವುದಕ್ಕೆ ಎಳನೀರು ಕೇಳಿದರು. ತಾನು ಯಜಮಾನತಿ ಅಲ್ಲ ಎಂದರೂ ಸಹ ಅವರು ಕೇಳಲಿಲ್ಲ. ಕೊನೆಗೆ ನನ್ನನ್ನು ತೋರಿಸಿ ಏನವ್ವ ನಿಮ್ಮ ಮಗಳೇ? ಎಂದರು. ತೋಟದ ಯಜಮಾನರ ಮಗಳು. ಎಳನೀರು ಕೊಟ್ಟರೆ ಖರ್ಚಾಗುತ್ತದೆ ಎಂದು ಹೊಟ್ಟೆಯಲಿ ಹುಟ್ಟಿದ ಮಗಳನ್ನು ಇಲ್ಲ ಅಂತೀಯಾ? ಎಂದು ಮುಂದೆ ಹೋದರು. ಊರಿಗೆ ಬಂದಾಗ ಕೆರೆಯ ಮೇಲೆ ಮೀರಾಳನ್ನು ನೋಡಿದಳು. ಮಹಡಿಯ ಮೇಲಿದ್ದ ಸಂಸಾರದ ಹೆಂಗಸು ಸತ್ಯಭಾಮಳ ರೂಮಿನ ಬಾಗಿಲಿಗೆ ಬಂದು ಮಾರು ದೂರದಲ್ಲಿ ನಿಂತು ಕೇಳಿಸಿಕೊಳ್ಳುತ್ತಿದ್ದ ದಿಗ್ಭ್ರಮೂಢಳಂತೆ ಹಿಂದಕ್ಕೆ ತಿರುಗಿದ್ದಳು. ಸತ್ಯಭಾಮಳು ರೂಮಿಗೆ ಒಳಗೇ ಬಂದು ಕುಳಿತುಕೊಂಡು ಹೇಳಿದಳು. "ಧೈರ್ಯವಿದ್ದವರು ರೂಢೀನ ಗೆಲ್ತಾರೆ, ಗೆದ್ದು ಬದುಕುತ್ತಾರೆ. ಹೇಡಿಗಳು ಮನಸ್ಸಿನ ಮೇಲೆ ಮಣ್ಣು ಮುಚ್ಚಿಕೊಂಡು ಮಣ್ಣು ಹುಳುವಿನ ಹಾಗೆ ಜೀವನ ಮಾಡುತ್ತಾರೆ"[7] ಎಂದಳು. ವಿವಾಹದಿಂದ ಪೂರ್ತಿ ಸುಖವಾಗುತ್ತದೆ ಎಂದು ನಾನು ಭ್ರಮಿಸುವುದಿಲ್ಲ.

ಸುತ್ತಲಿರುವ ಜನ ಸಹಕರಿಸದಿದ್ದರೆ ಸಂಸಾರದಲ್ಲಿ ಸುಖವಿರುವುದಿಲ್ಲ. ನನ್ನ ಹೋಡೆಯುವುದಕ್ಕೆ ನೀನಲ್ಲದೆ ಮತ್ತೆ ಯಾರು ಬಾದ್ಯರು? ತಂದೆಯನ್ನು ಊಟ ಮಾಡುವುದಕ್ಕೆ ಒತ್ತಾಯ ಮಾಡಿದಳು. ಚಪ್ಪಲಿಯನ್ನು ಬಿಟ್ಟು ಹೋಗಿದ್ದರು. ಹಳ್ಳಿಯಲ್ಲಿ ಎಕ್ಕಡವಿಲ್ಲದೆ ನಡೆಯಬಹುದು. ಆದರೆ ನಗರದ ರಸ್ತೆಗಳಲ್ಲಿ ಗಾಜಿನ ಚೂರು, ಕಾಯ್ದ ಟಾರು ಮೊದಲಾದ ಅಪಾಯಕರ ವಸ್ತುಗಳಿರುತ್ತವೆ. ತಕ್ಷಣ ಹಳೇ ವೃತ್ತ ಪತ್ರಿಕೆಯಲ್ಲಿ ಎರಡು ಪಾದರಕ್ಷಿಕೆಗಳನ್ನು ಸುತ್ತಿಕೊಂಡು ಬೇಗ ಬೇಗ ಹೆಜ್ಜೆ ಹಾಕಿ, ರಸ್ತೆಯಲ್ಲಿ ನಡೆದು ಬೆಟ್ಟಯ್ಯನವರನ್ನು ಕೂಗಿ ನಿಲ್ಲಿಸಿದಳು. ಇವುಗಳನ್ನು ತಮ್ಮ ತಂದೆಯವರಿಗೆ ಕೊಡಿ ಎಂದು ಕೈಲಿದ್ದ ಕಾಗದದ ಪೊಟ್ಟಣವನ್ನು ಬೆಟ್ಟಯ್ಯನವರಿಗೆ ಕೊಟ್ಟಳು.

ಕುಮುದಿನಿ ಮಂಡ್ಯದ ಎಂ.ಎಲ್.ಎ. ಕೆಂಪಣ್ಣನವರ ಎರಡನೆ ಮಗಳು. ಇಂಟರ್ ಮೀಡಿಯೆಟ್ ಓದಿದ್ದಾಳೆ. ವೀಣೆ ನುಡಿಸುವುದಲ್ಲದೇ ಮಧುರವಾಗಿ ಲತಾ ಮಂಗೇಶ್ಕರಳಂತೆ ಹಾಡಬಲ್ಲಳು. ಸಾಕಷ್ಟು ಕಥೆ ಕಾದಂಬರಿಗಳನ್ನು ಓದಿ, ಸಿನಿಮಾಗಳನ್ನು ನೋಡಿದವಳು. ಕುಮುದಿನಿಯ ಭಾಷೆ ಸುಸಂಸ್ಕೃತವಾಗಿತ್ತು. ಜೊತೆಗೆ ಕುಮುದಿನಿ ಹಾಲು ಬಿಳುಪು ಬಣ್ಣದ ತೆಳ್ಳನೆಯ ಮೈಕಟ್ಟಿನ ಲಕ್ಷಣವಾದ ಹುಡುಗಿ. ಮಂತ್ರಿಗಳಾದ ಮೇಲಗಿರಿಗೌಡರು ಮನಸ್ಸು ಮಾಡಿ ಅವರ ಮಗನಿಗೆ ತಂದುಕೊಂಡರೆ ಮುಂದೆ ಉಭಯತಾಪಿ

ಕಲ್ಯಾಣವಾಗುತ್ತದೆ ಎಂದು ಕಾಗದದಲ್ಲಿ ಬರೆದಿದ್ದರು. ಆದರೆ ರಂಗಮ್ಮ ಮಲ್ಲೇಶನ ಮದುವೆ ಏನು ಮಾಡ್ತಿರ? ಎಂದು ಗಂಡನನ್ನು ಕೇಳಿದಳು. ನಿನ್ನೆ ರಾತ್ರಿನಾಗ ರಂಗಮ್ಮನಿಗೆ ಒಂದು ಕನಸು ಬಿದ್ದಿತ್ತು. ಮಲ್ಲೇಶ ಅವಳನ್ನೇ ಮದುವೆ ಮಾಡಿಕೊಂಡಿದ್ದಾನೆ. ಎಷ್ಟು ವರ್ಷವಾದರೂ ಸಹ ಅವಳ ಹೊಟ್ಟೇಲಿ ಮಕ್ಕಳಾಗಿರಲಿಲ್ಲ. ಎಂದು ಇವನಿಗೆ ಬೇರೆ ಮದುವೆ ಮಾಡಾಳ ಅಂದರೆ ಆ ಚಿನಾಲಿ ಇವನ್ನ ಕೈಯಾಗೆ ಹಾಕಿಕೊಂಡು ಅವಕಾಶ ಕೊಡ್ತಿರಲಿಲ್ಲ. ಅಪ್ಪ ಮಗನ ಜೊತೆ ಇದ್ದರೆ ಬೇರೆ ಮದುವೆ ಮಾಡುತ್ತಾರೆ ಅಂತ ಒಳಂಗಿಂದೊಳಗೇ ಉಪಾಯವನ್ನು ಮಾಡಿಕೊಂಡು ಗಂಡನ್ನ ಬೇರೆ ಕರೆದುಕೊಂಡು ಹೋಗಿದ್ದಾಳೆ. ಅವಳಪ್ಪ ನಿನ್ನ ಹತ್ತಿರ ಬಂದು ಬ್ರಾಹ್ಮಣ ಶಾಪ ಎಂದರೆ ಏನು ಅಂತ ಗೊತ್ತಾಯ್ತೆ ಗೌಡಮ್ಮ? ಎನ್ನುತ್ತಿದ್ದ. ರಂಗಮ್ಮನಿಗೆ ಭವಿಷ್ಯ ತಿಳಿಯಲು ಕನಸಿಗಿಂತ ಬೇರೆ ನಿಖರವಾದ ಮಾಧ್ಯಮವಿರಲಿಲ್ಲ. ಯಜಮಾನರಿಗೇ ಕಾಣಿಸಿಕೊಂಡಿರುವುದರಿಂದ ಇದು ನಿಜವೆಂದರೆ ನಿಜ, ದೇವರನ್ನು ಪ್ರಾರ್ಥಿಸುತ್ತಾ ಹಾಗಾಗಬಾರದು ಎಂದು ಮಲಗಿದಲ್ಲೇ ಕೈ ಮುಗಿದಳು. ರಂಗಮ್ಮನಿಗೂ ಸಹ ಊರಿನಲ್ಲಿರುವ ದೊಡ್ಡ ಗೌಡರಿಗೆ ಸಾಯುವ ಕಾಲ ಬಂದಿದೆ. ಮಾಡಬೇಕಾದದ್ದು ಮಾಡಿದರೆ ಆಗಬೇಕಾಗಿದ್ದು ಆಗುತ್ತದೆ ಅಂತ ಗೊತ್ತಲ್ವಾ? ಈ ಮದುವೆಗೆ ನೀನು ಒಪ್ಪಿಗೆ ಸೂಚಿಸಿದೆ. ಈಗ ನನ್ನ ವಂಶ ನಿಂತೋಯ್ತಲ್ಲಾ ಯಾರ ತಪ್ಪು ? ಅಂತ ಅವರು ತನ್ನ ಮೇಲೆ ಕೋಪ ಮಾಡ್ತಿದ್ದಾರೆ. ಪಾಳೆಗಾರರ ಮನೆಯೋರು ನನ್ನ ಮಗಳ ಜಾತಿ ಕೆಡಿಸಿದರು, ಅವರ ವಂಶ ಹಾಳಾಗುತ್ತದೆ ಎಂದು ಅವಳ ಅಪ್ಪಾಜಿ ಗುಡಿಯಲ್ಲಿನ ಬಲಗೈಲಿ ಗಂಟೆ ಬಾರಿಸ್ಕಂಡು ಎಡಗೈಲಿ ಮಂಗಳಾರ್ತಿ ಮಾಡ್ತಾ ಶಾಪ ಹಾಕಿದ್ದಾರೆ. ದೇವರ ಮುಖವು ಮಂಗಳಾರತಿಯ ಬೆಳಕಿನಲ್ಲಿ ಉರಿಯುತ್ತದೆ. ಬೆಳ್ಳಿಯ ಮೂರು ನಾಮ, ಕಣ್ಣಿಗೆ ಬೆಳ್ಳಿಯ ಪಟಲ, ತಲೆಗೆ ಕಿರೀಟ, ನಾನು ಈ ಊರಾಗೇ ಇರಲ್ಲ, ಈ ದೇವಸ್ಥಾನ ಕೆಡವಿ ಬೇರೆ ಊರಿಗೆ ಹೊರಟು ಹೋಗುತ್ತೇನೆ ಎಂದು ಮೈ ಮೇಲೆ ಬಂದಾಗ ಅಮ್ಮನ ಪೂಜಾರಿ ಹೇಳುವಂತೆ ನುಡಿದು, ನೆಲದ ಮೇಲೆ ಒದೆಯುತ್ತದೆ. ದೇವಸ್ಥಾನದ ಹಿಂಭಾಗದ ಗೋಡೆ ಕುಸಿಯುತ್ತದೆ. ರಂಗಮ್ಮ ತಕ್ಷಣ ಎಚ್ಚರವಾದಳು. ಆಗಲೇ ಎದ್ದು ದೇವರ ಪಟವನ್ನಿಟ್ಟಿದ ಕೋಣೆಗೆ ಹೋದಳು, ಪಟಕೆ ಅರಿಶಿನ ಕುಂಕುಮ ಹಚ್ಚಿ ಒಂದು ಪಾವಲಿಯನ್ನು ಹಾಕಿ ಕೇಳಿಕೊಂಡಳು. ಪೂಜಾರಿಯ ಜಾತಿ ಕೆಡಿಸಾಕಿಲ್ಲ ಇವನಿಗೆ ಒಳ್ಳೆಯ ಬುದ್ಧಿಯನ್ನು ಕೊಡು. ನಮ್ಮದೆ ಗೌಡರುಗಳ ಜಾತೀಲಿ ಹೆಣ್ಣು ತಂದು ಮದುವೆ ಮಾಡಿಕೊಂಡರೆ ನಿನ್ನ ಗುಡಿಗೆ ಹೊಸ ಗೋಡೆ ಕಟ್ಟಿಸುತ್ತೇನೆ. ನಿನ್ನ ಕಣ್ಣು ಮುಂದೆ ಮದುವೆ ಮಾಡಿಸುತ್ತೇನೆ. ಪೂಜಾರಯ್ಯನ ಹತ್ತಿರ ಗಂಡು ಹೆಣ್ಣಿಗೆ ಆಶೀರ್ವಾದ ಮಾಡಿಸುತ್ತೇನೆ ಎಂದಳು. ಮನಸ್ಸಿಗೆ ಸ್ವಲ್ಪ ಸಮಾಧಾನವಾಯಿತು. ಪಟವನ್ನು ಮುಟ್ಟಿ ಕಣ್ಣಿಗೆ ಒತ್ತಿಕೊಂಡು ಮಲಗಿದಾಗ ನಿದ್ದೆ ಬಂದರೂ ಕನಸು ಬೀಳಲಿಲ್ಲ.

ವೆಂಕಟರಮಣಯ್ಯ ಬಂದು ಹೋದ ಮಾರನೆ ದಿನ ಬೆಳ್ಳಿಗೆ ಸತ್ಯಭಾಮೆ ಎದ್ದು ಮುಖ ಮೊಣಕೈ ಮತ್ತು ಕಾಲು ತೊಳೆದಳು. ಬೆನ್ನು ಭುಜದ ಗಾಯಗಳಿಗೆ ಇನ್ನು ಒಂದು ವಾರ ನೀರನ್ನು ಸೋಕಿಸಕೂಡದೆಂದು ವೈದ್ಯರು ಹೇಳಿದ್ದರು. ಪೂರ್ತಿ ಸ್ನಾನ ಮಾಡಲಿಲ್ಲ. ಬಟ್ಟೆ ಬದಲಾಯಿಸಿಕೊಂಡು ತಿಂಡಿಗೆ ಹೋಟೆಲಿಗೆ ಹೋಗಲು ಸಿದ್ಧಳಾಗುತ್ತಿದ್ದಳು. ಅಷ್ಟರಲ್ಲಿ ಶ್ರೀನಿವಾಸ ಬಂದು ಮಂಚದ ಮೇಲೆ ಕುಳಿತುಕೊಂಡು ಹೇಳಿದ, ನಿನ್ನೆ ನನ್ನ ಜೊತೆಯಲ್ಲಿ ಇದ್ದರಿಂದ ಬೆಳಗ್ಗೆ ಎದ್ದ ತಕ್ಷಣ ನಿನ್ನ ನೋಡಬೇಕು ಅನೀಸ್ತು ಎಂದನು. ಸತ್ಯಾಳು ಪಾಠ ಹೇಳುವ ಮೊದಲು ವಿವರವಾದ ನಾಲ್ಕೈದು ಗ್ರಂಥಗಳನ್ನು ಓದಿ ತುಲನೆ ಮಾಡಿ ಗ್ರಹಿಸುತ್ತಿದ್ದಳು. ಅನುಭವವು ಸ್ವಲ್ಪವೂ ಕಷ್ಟಕರವಾಗಿರಲಿಲ್ಲ. ಆದರೂ ಸಹ ಎಚ್ಚರ ತಪ್ಪಬಾರದೆಂದು ಕೆಲವು ಪುಸ್ತಕಗಳನ್ನು ನೋಡಿ ಸಣ್ಣ ಟಿಪ್ಪಣಿ ಮಾಡಿಕೊಳ್ಳುತ್ತಿದ್ದಳು. ಹೊರಗಿನಿಂದ ಯಾರೋ ಬಾಗಿಲು ತಟ್ಟಿದಂತಾಯಿತು. ತೆಗೆದು ನೋಡಿದಾಗ ಮನೆಯ ಮಾಲೀಕರು. ಇವತ್ತು ಸಾಯಂಕಾಲದ ಹೊತ್ತಿಗೆ ನಮ್ಮ ರೂಮು ಬೇಗನೆ ಖಾಲಿ ಮಾಡಿಕೊಡಿ ಎಂದರು. ಸೋಜಿಗದಿಂದ ಅವರ ಮುಖ ನೋಡಿದಳು. ಇಷ್ಟುದಿನ ಇದ್ದುದ್ದಕ್ಕೆ ಮುರಿದು ಕೊಂಡು ಅಡ್ವಾನ್ಸಿನಲ್ಲಿ ಉಳಿದದ್ದು ಕೊಟ್ಟುಬಿಡ್ತೀನಿ "ಬರೀ ದುಡ್ಡು ಸಂಪಾದನೆ ಮಾಡುಕೆ ಅಂತ ರೂಮು ಕಟ್ಟಿಸಿಲ್ಲ"[೨] ಎಂದು ಹೇಳಿ ಹಿಂತಿರುಗಿ ಹೋದರು.

ಸತ್ಯಭಾಮಳು ಸ್ವಲ್ಪ ಹೊತ್ತಿನಲ್ಲಿ ಕೂಗಿ ಕರೆದಳು. ಸ್ವಲ್ಪ ಬನ್ನಿ ಮಾತಾಡಬೇಕು ಎಂದು ಹೇಳಿ ಅವಳು ತನ್ನ ರೂಮಿಗೆ ಹೋದಳು. ಮೇಲೆ ಬಂದವರು ಹೊಸಲಿನ ಹೊರಗೆ ನಿಂತೇ ಕೇಳಿದರು, ಬೇಗ ಹೇಳಿ ಎಂದಾಗ ಇದ್ದಕ್ಕಿದ ಹಾಗೇ ರೂಮು ಖಾಲಿ ಮಾಡುವುದಕ್ಕೆ ಹೇಳಿದ, ಹ್ಯಾಗುಗುತ್ತೆ? ನಿಮಗಾಗಿರುವ ತೊಂದರೆ ಏನು? ಹಣ ಸಂಪಾದನೆ ಮಾಡುವುದಕ್ಕೆ ಹೋಟಲಿನವರು ಕಟ್ಟಿಸುತ್ತಾರೆ. ಅಲ್ಲಿ ಏನು ಬೇಕಾದರೂ ಮಾಡಬಹುದು ಆದರೆ ನಮ್ಮನೇಲಿ ಹೆಣ್ಣು ಮಕ್ಕಳಿದ್ದಾರೆ. ಇವತ್ತು ಖಾಲಿ ಮಾಡಿ ಬಿಡಿ ನಿಮಗೆ ಎಂಟು ಅವಧಿ ಕೊಟ್ಟಿದ್ದೇನೆ ಎಂದಾಗ ಸತ್ಯಭಾಮಳು ಕೋಪಗೊಂಡಳು. ಬಾಯಿ ಜೋರು ಮಾಡಿದರೂ ಹೆದರುವುದಿಲ್ಲ. ಬೀದೀಲಿ ಆಟೋ ರೀಕ್ಷಾದಿಂದ ಇಳಿದು ಗಂಡಸಿನ ಕೈಹಿಡಿದುಕೊಂಡು ಶೇಕ್‌ಹ್ಯಾಂಡ್ ಕೊಟ್ರಲ ಯಾವನು ಅವನು? ನಮ್ಮ ಹೆಣ್ಣು ಮಕ್ಕಳು ನೋಡಿದರೆ ಏನಾಗುತ್ತೆ ಪರಿಣಾಮ? ನಾವು ಎಂಥಾ ಮನೆತನದವರು ಗೊತ್ತಾ? ಎಂದನು. ಅಷ್ಟರಲ್ಲಿ ಮೇಲಿನ ಮನೆಯ ಯಜಮಾನರು ಕಾದುಕೊಂಡಿದ್ದರಂತೆ ಅಲ್ಲಿಗೆ ಬಂದು ತಮ್ಮ ಹೇಳಿಕೆ ನೀಡಿದರು. ನಾನು ಎದುರೀಗೇ ಹೇಳ್ತೀನಿ ಹಿಂದೆ ಮುಂದೆ ಮಾತಾಡೋನಲ್ಲ ನೋಡಿದರೆ ಹರಿಜನರಂತೆ ಕಾಣುತ್ತಿದ್ದನಂತೆ. ಗಾಂಧೀ ಟೋಪಿ ಅವನು ಈ ರೂಮಿನೊಳಕ್ಕೆ ಸೇರಿಸಿದ್ದರಂತೆ ನಿಮ್ಮ ತಂದೆಯವರು ಅವನು ಇವತ್ತು ಬೆಳಗ್ಗೆಯು ರೂಮಿಗೆ ಬಂದಿದ್ದ ಇಂಥದೆಲ್ಲ ನೋಡಿಯು ಆದರೆ ನಾವು ಮನೇಲಿರುವುದು ಹೇಗೆ? ನಾವು ಬಾಡಿಗೆ ಕೊಡೂದು ಎಂಬ ಹೇಳಿಕೆಯ ಅರ್ಥಕ್ಕೆ ಪ್ರವೇಶಿಸಿದ ಮಾಲೀಕರು ಬರೀ ದುಡ್ಡಿಗೆ ಕಟ್ಟಿಸಿಲ್ಲ ಎಂದಾಗ ಸತ್ಯಭಾಮಳಿಗೆ

ನಾಚಿಕೆಯಾಯಿತು. ಇನ್ನು ಮೂರು ದಿನಗಳವರೆಗೆ ಖಾಲಿ ಮಾಡ್ತೀನಿ ಎಂದಳು. ಬೇರೆ ಕಡೆಯಲ್ಲಾದರೂ ರೂಮನ್ನು ಮಾಡಬೇಕೆನಿಸಿದರೂ ಇನ್ನು ಎಷ್ಟು ದಿನಕ್ಕೆ ಬೇಕು ಬೇರೆ ರೂಮು? ಎಂಬ ಹಳೆಯ ಪ್ರಶ್ನೆ ಮತ್ತೆ ಹುಟ್ಟಿತು. ಶ್ರೀನಿವಾಸ ಬೇಗ ಬರಬಾರದೆ? ಐದುವರೆ ಕಳೆಯಿತು ಇನ್ನೆಷ್ಟು ದಿನಕ್ಕೆ ಎಂಬುದು ನಿಶ್ಚಯವಾದರೂ ಏನಾದರೂ ಏರ್ಪಾಡು ಮಾಡಬಹುದು. ಆದರೂ ಇವನು ಯಾಕೆ ಬರಲಿಲ್ಲ ಇನ್ನೂ? ಎಂದು ಕೊಂಡಳು. ಸತ್ಯಭಾಮಳು ಧೈರ್ಯ ಮಾಡಿಕೊಂಡು ಮಿಸ್ಟರ್ ಅಯ್ಯಂಗಾರ್ ಎಂದು ಕರೆದಳು. ತಂದೆಯ ಜೊತೆಯಲ್ಲಿಯೇ ಇದ್ದ ಹಿರಿಯ ಮಗಳು ತಲೆ ಎತ್ತಿ ನೋಡಿದಳು. ಸತ್ಯಭಾಮ ಕರೆಯುತ್ತಿದ್ದಾಳೆ ಎಂದು ನಿಮ್ಮ ತಂದೆಗೆ ಹೇಳಿ ಎಂದು ರೂಮಿಗೆ ಬಂದಳು.

ರೂಮಿನ ಮಾಲೀಕರು ಮನೆಯ ಬಾಗಿಲಿಗೆ ಬಂದು ನಿಂತರು. ಒಳಗೆ ಕರೆಯದೆ ಸತ್ಯಳೇ ಹೊರಗೆ ಬಂದು ಹೇಳಿದಳು. ರೂಂ ಬಿಡಾಕಾಗುವುದಿಲ್ಲ ಬೇಕೆಂದರೆ ನೀವು ನ್ಯಾಯಾಲಕ್ಕೆ ಹೋಗಬಹುದು. ಅವರು ತಬ್ಬಿಬ್ಬಾದರು ಏನು ನೀವನ್ನೊದು? ಅವಮಾನವಾಗುವಂತ ಮಾತುಗಳು ನಿಮ್ಮ ಬಾಯಲ್ಲಿ ಬಂದರೆ ಪೋಲೀಸರಿಗೆ ಕಂಪ್ಲೇಂಟು ಕೊಡ್ತೀನಿ. ಒಬ್ಬಂಟಿ ಹೆಂಗಸಿನ ಹತ್ತಿರ ಮರ್ಯಾದೆ ಕೊಟ್ಟು ಮಾತಾಡಬೇಕು ಎಂದಳು. ಓದಿಕೊಳ್ಳುವುದಕ್ಕೆ ರೂಮು ಬೇಕಾದ್ದರಿಂದ ಬಿಟ್ಟುಕೊಡಿ ಎಂದರು. ನೀವೆ ಆಗಲಿ ಬಾಡಿಗೆಯೋರೇ ಆಗಲಿ ಹೆಚ್ಚು ಕಮ್ಮಿ ಮಾತಾಡಿದರೆ ಸುಮ್ಮನಿರಲ್ಲ ರೂಮಿಗೆ ಯಾರನ್ನಾದರೂ ಕರೆದುಕೊಂಡು ಬಂದರೂ ಅದನ್ನು ಕೇಳುವ ಅಧಿಕಾರವಿಲ್ಲ. ನಾನು ಹೋಗುವಾಗ ಬರುವಾಗ ಕಿಟಕೀಲಿ ಇಣಕಿ ನೋಡಬಾರದು. ಅವರು ನನ್ನನ್ನು ಮದುವೆಯಾಗುವರು ತಿಂಗಳು ತುಂಬಿದಾಗ ಬಾಡಿಗೆ ತೆಗೆದುಕೊಂಡು ಹೋಗಬಹುದು ಎಂದಾಗ ಮರುಮಾತಿಲ್ಲದೆ ಹೋದರು. ಹತ್ತಿರದಲ್ಲಿದ್ದ ಹೋಟೆಲ್‌ನಲ್ಲಿ ಊಟ ಮಾಡುತ್ತಿದ್ದಳು. ಏಕೆ ಬರಲಿಲ್ಲ ಎಂಬ ಆತಂಕ ಒಂದು ಕಡೆಯಾದರೆ, ನಾನು ಊಟಕ್ಕೆಂದು ಹೋದಾಗ ಅವನು ಬಂದು ಎಲ್ಲೆಂದು ಹುಡಿಕ್ಯಾನು ಎಂಬ ಇನ್ನೊಂದು ಕಡೆ ಅವನನ್ನು ನೋಡಲು ಮನಸು ತವಕಿಸುತ್ತಿತ್ತು.

ಶ್ರೀನಿವಾಸನ ಸ್ನೇಹಿತರಾದ ಮೂರು ಜನರನ್ನು ಸಾಕ್ಷಿಗೆ ಕರೆದುಕೊಂಡು ಮದುವೆಯಾಗಬೇಕಾದ ದಿನ ಇಬ್ಬರೂ ಸಬ್ ರಿಜಿಸ್ಟರ್ ಆಫೀಸಿಗೆ ಹೋದರು. ವಿಶೇಷ ವೇಷ ಭೂಷಣಗಳಿರಲಿಲ್ಲ. ಇಬ್ಬರೂ ತಮ್ಮ ನಿತ್ಯದ ಉಡುಗೆ ತೊಡುಗೆಯಲ್ಲಿದ್ದರು. ಆಫೀಸಿನ ಮುಖ್ಯ ಗುಮಾಸ್ತ ಹೇಳಿದ, ಈ ದಿನ ಸಾಹೇಬರು ರಜದ ಮೇಲಿದ್ದಾರೆ ರಿಜಿಸ್ಟರ್ ಆಗುವುದಿಲ್ಲ ಎಂದರು. ಅವರಿಲ್ಲದಿದ್ದರೆ, ಡೆಪುಟಿಯಾದರೂ ಇರಬೇಕಲ್ಲಾ ಎಂದನು. ತಪ್ಪಿಗೆ ಸಿಕ್ಕಿಸಬೇಡ ಉಳಿದ ರಿಜಿಸ್ಟರ್‌ಗಳನ್ನು ಹೇಗೆ ಮಾಡುತ್ತಿದ್ದೀರಿ? ಅದಕ್ಕೆ ಸಾಹೇಬರು ಬೇಡವೇ? ಉತ್ತರ ತೋಚದೇ ತಬ್ಬಿಬ್ಬಾದರು. ಕೊನೆಗೆ ಏನೂ ನಿರ್ಧರಿಸಿದಂತೆ ನಿಮ್ಮಲ್ಲಿ ಶ್ರೀನಿವಾಸ ಯಾರು? ಎಂದು ಕೇಳಿದನು. ಅನಂತರ ಅವನ ಭುಜದ ಮೇಲೆ ಕೈ ಇಟ್ಟು ಒಳಗೆ ಕರೆದುಕೊಂಡು

ಹೇಳಿದನು. ಬಡ ನೌಕರರು ಮದುವೆ ಮಾಡಸ್ಕಕಾಗಲ್ಲ, ಮಂತ್ರಿಗಳಿಂದ ಆಕ್ಷೇಪ ಬಂದಿದೆ. ಕೋಪದಿಂದ ಉರಿದುಬಿಟ್ಟನು. ಮೇಲಾಧಿಕಾರಿ ರಜದಲ್ಲಿರುವುದರಿಂದ ಸದರಿ ಪಾರ್ಟಿಯು ನಾಲ್ಕು ದಿನದ ನಂತರ ಬರತಕ್ಕದ್ದು ಅಂತ ಬೇಕಾದರೆ ಬರೆದುಕೊಡುವ ಅಧಿಕಾರ ನನಗೆ ಇದೆ. ಹೊರಗೆ ಬಂದು ಸತ್ಯಭಾಮಳಿಗೂ ಸ್ನೇಹಿತರಿಗೂ ವಿಷಯವನ್ನು ತಿಳಿಸಿದಾಗ ಸತ್ಯಭಾಮಳು ಸ್ತಂಭೀಭೂತಳಾದಳು. ಮದುವೆಗೆ ವಿರೋಧ ಬರಿ ಯಜಮಾಂತೀಯದು ಅಂತ ಮಾಡಿದ್ದೆ, ಆದರೆ ಯಜಮಾನರದು. ಇದೆ ಎಂನ್ನುವುದು ತಕ್ಷಣ ಅರ್ಥವಾಗಿ ತಂದೆಯನ್ನು ಬೈದನು.

ನಾವಿಬ್ಬರೂ ವಯಸ್ಕರಾಗಿದ್ದರಿಂದ ಮದುವೆ ತಡೆಯೊಕೆ ರಾಷ್ಟ್ರಾಧ್ಯಕ್ಷರಿಗೂ ಅಧಿಕಾರವಿಲ್ಲ. ಸಬ್ ರಿಜಿಸ್ಟರ್ ಬಂದಾಗ ರಿಜಿಸ್ಟರ್ ಮಾಡದಿದ್ದರೆ ನ್ಯಾಯಾಲಕ್ಕೆ ಹೋಗಿ ನೋಟೀಸ್ ಕೊಡ್ತಿವಿ ಎಂದನು. ಗುಟ್ಟಿನಲ್ಲಿ ಬಂದು ನಾಲ್ಕು ಜನ ಸ್ನೇಹಿತರನ್ನು ಕರಕೊಂಡು ನಂದಿಗೂ ಬನಶಂಕರಿಗೂ ಹೋಗಿ ಹಾರ ಹಾಕದು ಶಾಸ್ತ್ರ ಮಾಡಿಕೊಂಡು ಬಿಡುವುದು. ಬೆಳಗ್ಗೆ ದಿನ ಪತ್ರಿಕೆಯಲ್ಲಿ ಟಿ.ವಿ. ಸತ್ಯಭಾಮಾ ಮತ್ತು ಟ.ಎಮ್. ಶ್ರೀನಿವಾಸರ ವಿವಾಹವು ಇಂತಹ ಕಡೆ ನೆರವೇರಿತು ಹಾಕಿಸಿಬಿಡಿ ಸರಿಯಾಗುತ್ತೆ ಎಂದನು. ಇದು ನಿಜವೆಂದು ಕಂಡರೂ ಸಹ ಮಂತ್ರಮಗ ಪಾಳೇಗಾರ ಮನೆತನದವನು. ರಾಜ್ಯ ಆಳಿದ ಶಕ್ತಿ ನನಗೂ ಇದೆ. ಆಫೀಸಿನಲ್ಲಿ ಆಗಬೇಕು ಎನ್ನುತ್ತಾ ಅಲ್ಲಿಂದಾ ಒದರಿಕೊಂಡು ಹೊರಟನು. ತಾಯಿಗೆ ಗೊತ್ತಿಲ್ಲದೆ ಸುಕನಾತಿಯನ್ನು ಮದುವೆಯಾಗುವುದಕ್ಕೆ ಹೋಗಿದ್ದ ವಿಷಯ ತಿಳಿದು ಗಾಬರಿಯಾದಳು. ದೇವರನ್ನು ಸ್ಮರಿಸುತ್ತಾ "ಬ್ಯಾಡ ಕನೊ ತಮ್ಮಯ್ಯ"[3] ಎಂದು ಕಣ್ಣಲ್ಲಿ ನೀರು ತುಂಬಿಕೊಂಡು ಹೇಳಿದಳು. ಇವತ್ತಿಲ್ಲದಿದ್ದರೆ ಇನ್ನೂ ನಾಲ್ಕು ದಿನದಲ್ಲಿ ಮಾಡ್ಕಂಡೇ ಮಾಡ್ಕಂತೀನಿ ಅದೇನ್ ಮಾಡ್ತೀಯಾ? ಎಂದು ಸವಾಲು ಹಾಕುವನಂತೆ ಕೇಳಿದ. ಒಂದ್ ಹಗ್ಗವನ್ನು ತಗಂಡ್ ನೇಣ್ ಹಾಕೊತೀನೀ ಎಂದು ಉತ್ತರ ಕೊಟ್ಟಳು. ಉಗ್ರಾಣದ ರೂಮಿಗೆ ಹೋಗಿ ಕಾರಿನ ಮೇಲೆ ಸಾಮಾನು ಬಿಗಿಯಲು ಉಪಯೋಗಿಸುತ್ತಿದ್ದ ಉದ್ದನೇಯ ಶಣಬಿನ ಹಗ್ಗವನ್ನು ತಂದು ಪ್ಯಾನು ತಗುಲಿಸಲು ರೂಮಿನಲ್ಲಿ ಹಾಕಿದ್ದ ಕೊಕ್ಕೆಗೆ ಕುಣಿಕೆ ಮಾಡಿ ಎದಿರಿಗೇ ಎಸೆದಳು. ಒಳಗೆ ಹಗ್ಗಕ್ಕೆ ಜೀರು ಕುಣಿಕೆ ಹಾಕುತ್ತಿದ್ದಳು. ಶ್ರೀನಿವಾಸನಿಗೆ ಕೋಪ ಬಂದು ನಿಂಗೇನ್ ಬುದ್ದಿನೆಟ್ಟಗೈತೋ ಇಲ್ವೋ? ಎಂದು ಹಗ್ಗವನ್ನು ಜಾಡಿಸಿ ಕಿತ್ತುಕೊಂಡು ಕೊಕೆಗೆ ಹಾಕಿದ ಕುಣಿಕೆಯನ್ನು ಬಿಡಿಸಿದ. ಅಡಿಗೆ ಮನೆಗೆ ಬಂದು ಚಾಕು ತಂದು ಎದುರಿಗೆ ಹಗ್ಗವನ್ನು ಒಂದೊಂದು ಗೇಣಿಗೆ ಚೂರು ಮಾಡಿ ಹಾಕಿದ. ಇದನ್ನು ಕುಯ್ದ್ ಹಾಕಿದರೆ, ಮನೆಯಲ್ಲಿ ಬೇರೆ ಹಗ್ಗವಿಲ್ಲ ಅಂತಿಯಾ? ಎಂದಳು. ತುಟಿ ಹಿಡಕೊಂಡು ತುಪ್ಪ ಕುಡಿಸಿ ದಪ್ಪಗೆ ಮಾಡಿ ಸಾಕಿದ್ದುಕೆ ಶಕ್ತಿಯಾಗಿದ್ದೇನೆ. ಅಂತ ನನ್ನ ರಟ್ಟೆ ಹಿಡ್ಕೊಂಡು ನಿಲ್ಲುಸ್ತೀಯಾ? ನಿನೇನ್ ಮನೇಲಿ ಕುಂತಿದ್ದೀಯಾ ನೋಡ್ಕಂಡು? ಸುಕನಾತಿಯನ್ನು ನೋಡುವುದಕ್ಕೆ ಹೋಗುವುದಿಲ್ವಾ? ಎಂದು ನೆಲದ ಮೇಲೆ ಮಲಗಿ ಬಿಕ್ಕಿ ಬಿಕ್ಕಿ ಅಳತೊಡಗಿದಳು.

ರಂಗಮ್ಮನಿಗೆ ಐದು ವರ್ಷದಿಂದ ಮಕ್ಕಳಾಗಿರಲಿಲ್ಲ. ಗೋಪುರದ ಕಳಸಕ್ಕೆ ಚಿನ್ನದ ತಗಡು ಹೊಡೆಸುತ್ತೇನೆಂದು ಹರಕೆ ಮಾಡಿದಾಗ ದೇವರ ಕೃಪೆಯಿಂದ ಹುಟ್ಟಿದೆ. ಈಗ ದೇವರಿಲ್ಲ ಅಂತೀಯಾ? ನಾಳೆ ನಿನ್ನ ಹುಟ್ಟಿಸಿದ ಅಪ್ಪನ್ನೇ ಇಲ್ಲಾ ಅಂತೀಯಾ? ಎಂದಳು. ಮಂಗಳಾರತಿ ಆದ ಮೇಲೆ ತಾಯಿಗೆ ತೀರ್ಥ ಕೊಟ್ಟರು. ಭಕ್ತಿಯಿಂದ ನಾಲ್ಕಾಣೆಯನ್ನು ಹಾಕಿ ಕೈ ಆಡಿಸಿ ಕಣ್ಣಿಗೆ ಒತ್ತಿಕೊಂಡಳು. ಅವನಿಗೆ ಕೊಡಲಿಲ್ಲ ಹೊರಟು ಹೋದರು. ಅನಂತರ ಬೆಳ್ಳಿಯ ತೀರ್ಥ ಪಾತ್ರೆಯನ್ನು ಹಿಡಿದು ತಂದು ತೀರ್ಥಕೊಟ್ಟರು. ಇವನನ್ನು ಗಮನಿಸಲಿಲ್ಲ. ಅವನ ತಾಯಿ ಪೂಜಾರೇ "ಹುಡುಗ ಬುದ್ಧಿ, ತಪ್ಪು ಯೋಚನೆ ಮಾಡ್ತು"[೪] ಕೋಪ ಮಾಡಿಕೊಬೇಡ ಅದಕ್ಕೂ ತೀರ್ಥ ಕೊಡಿ ಎಂದಳು. ಅವರು ಮಾತನಾಡಲಿಲ್ಲ ತೀರ್ಥವನ್ನು ಕೊಡಲಿಲ್ಲ. ಅವನ ಮುಖ ನೋಡಬೇಡ ನಾವೂ ಇರುವಾಗ ಮದುವೆ ಮಾಡುಕೆ ಬಿಡಲ್ಲ ತೀರ್ಥ ಕೊಡಿ ಎಂದಳು. ದೇವಸ್ಥಾನದೊಳಗಿಂದ ತೀರ್ಥ ಪಾತ್ರೆ ಹಿಡಿದು ಬಂದರು. ಆದರೆ ಶ್ರೀನಿವಾಸ ಕೈ ನೀಡಲಿಲ್ಲ. ದೇವರ ಮುಂದೆಲ್ಲ ನಿನ್ನ ಜಂಬ ಕೈ ನೀಡಿ ತಟ್ಟೆಗೆ ನಾಣ್ಯ ಹಾಕಿ ಕೈ ನೀಡಿದ. ದೋಣಿ ಗುಡಿಸಿದ ಅಂಗೈ ಬಿದ್ದ ಹಾಲು ನೀರಿನ ತೀರ್ಥವನ್ನು ಕುಡಿದನು.

ಸತ್ಯಭಾಮಳ ಬಾಲ್ಯ ಸ್ನೇಹಿತೆ ಹೊನ್ನಮ್ಮ ಶಾಲೆಗೆ ಅವರೆಕಾಳು, ರೊಟ್ಟಿ ತಂದಿದ್ದಳು. ತಾಯಿ ಇಲ್ಲದ ಸತ್ಯಭಾಮಳ ಮನೆಯಲ್ಲಿ ಇದನ್ನೆಲ್ಲ ಮಾಡುವವರಾರು? ಸುಲಭವಾದ ತಿಂಡಿಗಳನ್ನು ಮಾಡುತ್ತಿದ್ದರು. ಸ್ನೇಹಿತೆ ಕೊಟ್ಟ ತಿಂಡಿಗಳನ್ನು ತಿನ್ನುತ್ತಿದ್ದಳು. ಬೆಂದ ಪದಾರ್ಥವನ್ನು ತಿನ್ನುವುದು ಹೇಗೆ ತಪ್ಪಾಗುತ್ತದೆ? ಒಂದೇ ಬಾವಿಯಲ್ಲಿ ಎಲ್ಲರೂ ನೀರನ್ನು ಸೇದುತ್ತಾರೆ, ಬೇಯಿಸಿದ ಮಾತ್ರಕ್ಕೆ ಮೈಲಿಯಾಗುತ್ತದೆಯೇ? ಗಂಗಮ್ಮನಿಗೆ ಮುಟ್ಟಿಲ್ಲ, ಹಾಲಿಗೆ ಕಟ್ಟಿಲ್ಲ ಎಂಬ ಮಾತನ್ನು ಹೇಳುತ್ತಿದ್ದರು. ಹೊನ್ನಮ್ಮ ಮುಚ್ಚಿ ಕೊಡುತ್ತಿದ್ದಳು. ಅವಳು ಮರೆಯಲ್ಲಿ ಮೆಲುಕು ಹಾಕಿ ಮುಗಿಸುತ್ತಿದ್ದಳು. ತಮ್ಮ ಮತದ ಹುಡಿಗಿಯರಿಗೆ ಗೊತ್ತಾಗಿ ಅವಳ ಅಪ್ಪನಿಗೆ ಹೇಳಿ ಹೊಡೆಯುವುದಕ್ಕೆ ಹೋಗಿದ್ದರು. ತಾಯಿ ಸತ್ತ ಹೆಣ್ಣು ಹುಡುಗಿ ನೆನಪು ಬಂದು ಕೈಯನ್ನು ಇಳಿಬಿಟ್ಟು ನನ್ನ ಮರ್ಯಾದೆ ಕಳೆಯುವುದಕ್ಕೆ ಹುಟ್ಟಿದಿಯಾ ಎಂದರು. ಮರುದಿವಸದಿಂದ ಕೊಟ್ಟ ತಿಂಡಿಯನ್ನು ಮುಟ್ಟಲಿಲ್ಲ. ಪ್ರೀತಿಯಿಂದಿದ್ದ ಸ್ನೇಹವು ಮಾತನಾಡುವುದು ನಿಂತು ಹೋಯಿತು.

ಮರುದಿನ ಬೆಳಿಗ್ಗೆ ಕಾಲೇಜಿಗೆ ಹೋಗುವಾಗ ಒಂದು ಹೋಟೆಲಿಗೆ ಹೋಗಿ ಅಲ್ಲಿಂದ ಮಂತ್ರಮೇಲಗಿರಿಗೌಡನ ಮನೆಗೆ ಕರೆ ಮಾಡಿದಳು. ಹಲೋ ಎಂಬ ಧ್ವನಿ ಮತ್ತು ರೀತಿಯಲ್ಲಿ ಫೋನ್ ಎತ್ತಿಕೊಂಡಿರುವವರು ರಂಗಮ್ಮನೆಂದು ತಿಳಿಯಿತು. ಅವರನ್ನು ಹೇಗೆ ಕೇಳುವುದು ಎಂಬ ಸಂಕೋಚ, ಅನುಮಾನ, ಭಯಗಳು ಉಂಟಾದುವು, ಯಾರು ಮಾತನಾಡುವುದು? ರಂಗಮ್ಮ ಕೇಳಿದಾಗ ಶ್ರೀನಿವಾಸ ಬೇಕಾಗಿತ್ತು, ನಿವ್ಯಾರು ಹೇಳಿ ಸತ್ಯಭಾಮ ಎಂದಳು. ಆಹಾ ತಾಟಗಿತ್ತಿ ನಮ್ಮ ಅವ್ವ ಅವನು ಬೆಂಗ್ಳೂರಾಗಿಲ್ಲ

ನಿನ್ನ ಪಾಡಿಗೆ ನೀನು ಇರು, ತಿರ್ಮಲಾಪುರದಾಗೆಲ್ಲ ಮರ್ಯಾದೆ ಹೋಗದೆ ನಿಂದು. ಅವನು ಗಂಡು ಹುಡುಗ, ಯಾರು ಕೇಳುವುದಿಲ್ಲ. ನೀನು ಹಿಂಗಾಗಬಹುದಾ ದಗಾಬಾಜಿ? ಫೋನಿನಲ್ಲಿ ಈ ರೀತಿ ಮಾತುಗಳು ಬರುತ್ತವೆ ಎಂದು ಸತ್ಯಭಾಮಳು ನೀರಿಕ್ಷಿಸಿರಲಿಲ್ಲ. ರಂಗಮ್ಮ ಫೋನು ಎತ್ತಿಕೊಳ್ಳುತ್ತಾರೆಂದು ಕಲ್ಪಿಸಿಕೊಂಡಿರಲಿಲ್ಲ. ಅವರಿಗೆ ತಕ್ಷಣ ಉತ್ತರಕೊಡಬೇಕೆಂದು ಹೊಳೆಯಲಿಲ್ಲ. ಹೆಂಗಸು ಹೋಟೆಲಿನಿಂದ ಫೋನು ಮಾಡುತ್ತಿರುವಾಗ ಜನರ ಕೂತುಹಲ ಅಸಾಧ್ಯ ಎಂಬ ಅರಿವಾಗಿ ಮಾತನಾಡಲಿಲ್ಲ.

ರಂಗಮ್ಮ ಹೇಳುತ್ತಿದ್ದರು ಕುದುರೆ ಗೊಂತ್ನಾಗೆ ಕುದುರೆ ಇರಬೇಕು, ಕತ್ತೆ ಗೊಂತ್ನಾಗೆ ಕತ್ತೆ ಇರಬೇಕು. ನಿನ್ನ ಜಾತಿ ಮರ್ವಾದಿ ಮರೆತು ಬ್ಯಾರೆಯವರ ತಣಿಗೆಲಿ ಎಂಜಲು ತಿನ್ನಾಕೆ ಯಾಕ ಬರತಿಯೆ ನನ್ನ ತಾಯಿ ಎಂದಳು. ತಕ್ಷಣ ರೀಸೀವರನ್ನು ಕೆಳಗೆ ಇಟ್ಟಳು. ನಮ್ಮೂರಿನಲ್ಲಿ ಇದುವರೆಗೆ ಇಂತ ಮಾತುಗಳನ್ನು ಆಡಿರಲಿಲ್ಲ. ಅಪಮಾನವಾದಂತಾಗಿ ಮನಸ್ಸು ಕುದಿಯುತ್ತಿತ್ತು. ಈ ಮನಸ್ಥಿತಿಯಲ್ಲಿ ತರಗತಿಗೆ ಹೋದರೂ ಪಾಠ ಮಾಡುವುದು ಸಾಧ್ಯವಿಲ್ಲ ಎನಿಸುತ್ತಿತ್ತು. ಆದರೂ ಸಹ ಅಧ್ಯಾಪಕರ ಕೊಠಡಿಗೆ ಹೋಗಿ ಕುಳಿತಳು. ಜವಾನು ಒಂದು ಕಾಗದವನ್ನು ತಂದು ಮುಂದಿಟ್ಟ. ಆ ಕಾಗದದಲ್ಲಿ ನಡೆದಿರುವಂತಹ ಘಟನೆಗಳನ್ನು ಹೇಳುತ್ತಾ, ನಮ್ಮ ಮದುವೆ ನಡೆಯುವುದು ಸಾಧ್ಯವಿಲ್ಲ. ನನ್ನನ್ನು ಮರೆತುಬಿಡು ಊರಿನಲ್ಲಿ ನಿನ್ನ ತಂದೆ ಕೃಷರಾಗಿದ್ದಾರೆ. ವೆಂಕಟೇಶ ಚೆನ್ನಾಗಿದ್ದಾನೆ. ಎಂದು ಬರೆದಿದ್ದ ಕಾಗದವನ್ನು ಓದಿದ ತಕ್ಷಣ ಸತ್ಯಭಾಮಳ ಬುದ್ಧಿಗೆ ಮಂಕು ಹಿಡಿದಂತಾಯಿತು. ತಡೆಯಲಾರದಷ್ಟು ಅಳು ಒತ್ತಿಕೊಂಡು ಉಕ್ಕಿತು. ಸುಮ್ಮನೆ ಬಿಕ್ಕಿ ಬಿಕ್ಕಿ ಅತ್ತು ಬಿಟ್ಟಳು. ಈಗ ಎಲ್ಲಿಗೆ ಹೋಗುವುದು? ಕೋಣೆಗೆ ಅಥವಾ ಪುನಃ ಕಾಲೇಜಿಗೆ ಹೋಗುವುದು ಸಾಧ್ಯವಿಲ್ಲವೆಂದು ತಿರ್ಮಾನಿಸಿಕೊಂಡಳು.

ಸತ್ಯಭಾಮಳು ಮೈಸೂರಿಗೆ ಶ್ರೀನಿವಾಸನನ್ನು ಭೇಟಿ ಮಾಡುವುದಕ್ಕೆ ಹೋದಳು. ಏನು ಕೇಳುವುದು? ಏನು ಹೇಳುವುದು? ಕೋಪ ತೋರಿಸುವುದೇ? ಮತ್ತೆ ಕಣ್ಣೀರು ಹಾಕುವುದೇ ನನ್ನನ್ನು ನಡು ನೀರಿನಲ್ಲಿ ಮುಳುಗಿಸ ಬೇಡ ಎಂದು ಅನುನಯ ಮಾಡುವುದೇ? ಯಾವುದು ತಿಳಿಯಲಿಲ್ಲ. ಸುಮ್ಮನೆ ಅವನ ಹತ್ತಿರ ಹೋಗದೇ ಹಿಂತಿರುಗಿದಳು. ಶ್ರೀನಿವಾಸನ ಮೇಲೆ ಕೋಪ ಬರುತ್ತಿತ್ತು. ಮುಂದೆ ನನ್ನ ಜೀವನದ ಗತಿ ಏನು? ಒಮ್ಮೆಯೂ ಸುಳಿಯಲಿಲ್ಲ. ದೇಶೀಯ ಕಾಲೇಜಿನ ಉಪನ್ಯಾಸಕ ವೃತ್ತಿಯಿಂದ ತೆಗೆದು ಹಾಕುತ್ತಾರೆ ಎಂದು ಗೊತ್ತಾದ ನಂತರ ಚಿನ್ನ ಬೆಳ್ಳಿ ಅಂಗಡಿಯಲ್ಲಿ ತನ್ನ ಐವತ್ತು ರೂಪಾಯಿಗಳಿಗೆ ಎರಡು ಬೆಂಡೋಲೆಗಳನ್ನು ಮಾರಿದಳು. ಅಲ್ಲಿಯೇ ಇನ್ನೊಂದು ಅಂಗಡಿಯಲ್ಲಿ ಐದು ರೂಪಾಯಿಗಳನ್ನು ಕೊಟ್ಟು ಒಂದು ಜೊತೆ ನಕಲಿ ಓಲೆಗಳನ್ನು ಕೊಂಡು ಕಿವಿಗೆ ಇಟ್ಟುಕೊಂಡಳು. ಹಸಿವಾಗುತ್ತಿತ್ತು, ದಾರಿಯಲ್ಲಿ ಸಿಕ್ಕಿದ ಹೋಟೆಲಿಗೆ ಹೋಗಿ ಉಪಾಹಾರ ಮಾಡಿದಳು. ಕಾಲೇಜಿಗೆ ಹೋಗುವುದನ್ನು

ಬಿಡಬಾರದೆಂದು ಬೆಳಿಗ್ಗೆ ಎದ್ದು ಕಾಲೇಜಿಗೆ ಹೋದಳು. ಅಧ್ಯಾಪಕರ ಕೊಠಡಿಯಲ್ಲಿರುವಾಗ ಜವಾನ ಬಂದು ರುಜು ಮಾಡಿಸಿಕೊಂಡ ಲಕೋಟೆಯನ್ನು ಕೊಟ್ಟನು.

ಸತ್ಯಭಾಮಳು ಅದೇನಿರಬಹುದು ಎಂದು ತೆಗೆದು ನೋಡಿದಾಗ ಪ್ರೀನ್ಸಿಪಾಲರಾದ ರಾಜರಾಯರು ಬರೆದಿದ್ದರು. ಸರಿಯಾದ ತರಗತಿಗಳನ್ನು ತೆಗೆದುಕೊಳ್ಳದೆ, ರಜಾ ಚೀಟಿ ಕೊಡದೆ, ಕಾಲೇಜಿಗೆ ಬರದೆ, ಇದ್ದ ತಪ್ಪಿಗಾಗಿ ನಿಮ್ಮ ಸಮಝಾಯಿಸಿ ಕೇಳಿದಕ್ಕೆ ಇದುವರೆಗೂ ನಿಮ್ಮಿಂದ ಉತ್ತರವಿಲ್ಲ. ಅಲ್ಲದೆ ಪುನಃ ಎರಡು ದಿನ ರಜಾ ಚೀಟಿ ಕೊಡದೆ ಕಾಲೇಜಿನಿಂದ ತಪ್ಪಿಸಿಕೊಂಡಿದ್ದೀರಿ. ಕಾನೂನಿಗೆ ಸಮ್ಮತವಾಗುವಂತೆಯೇ ದಾಖಲೆಗಳನ್ನು ತಯಾರಿಸಿದರು. ಆದರಿಂದ ನಿಮ್ಮ ಸೇವೆಯನ್ನು ಈ ದಿನದಿಂದ ವಜಾ ಮಾಡಲಾಗಿದೆ ಜೀವನ ಮಾಡುವುದಕ್ಕೆ ಎಲ್ಲಾದರೂ ಕೆಲಸಕ್ಕೆ ಸೇರಿಕೊಳ್ಳಬೇಕು ಎಂದು ಮನಸ್ಸಿಗೆ ಸಮಾಧಾನ ಮಾಡಿಕೊಂಡಳು.

ಮಾತಂಗಿ ತಿರುಮಲಾಪುರದ ಮಾದಿಗರ ಜಾತಿಯ ಒಬ್ಬ ಬಡ ಬಾಲ್ಯ ವಿಧವೆ. ಇವಳಿಗೆ ಇವಳ ಒಂದು ಗುಡಿಸಲೇ ಆಸ್ತಿ. ಇವಳನ್ನು ಯಾರಾದರೂ ಮರು ಮದುವೆಯಾಗುವವರು ಸಿಕ್ಕಿದರೆ ಮದುವೆಯಾಗುವಳಿದ್ದಳು, ಆದರೆ ಅಂತವರು ಯಾರು ಸಿಕ್ಕಿರಲಿಲ್ಲ, ಈಗ ಸುಮಾರು ಇಪ್ಪತ್ತೇಳು ವಯಸ್ಸಿನ ಮಾತಂಗಿ ಕಪ್ಪಾದರೂ ಹೊಸ ಮಳಕದಂತೆ ಮೊಪ್ಪಾಗಿದ್ದಾಳೆ. ಒಂದು ದಿನ ಸಂಜೆಯ ಹೊತ್ತಿನಲ್ಲಿ ಊರು ಸಮೀಪವಿರುವ ವೆಂಕಟರಮಣಯ್ಯನವರ ತೋಟದಲ್ಲಿ ಸೊಗೆ ಕಟ್ಟಿಕೊಳ್ಳುತ್ತಿದ್ದಳು. ವೆಂಕಟರಮಣಯ್ಯನವರು ಹಿಂದಿನಿಂದ ಬಂದು ಏನೇ ಇದು? ಎಂದದ್ದಕ್ಕೆ ಹೆದರಿದಳು. "ಹಿಟ್ಟುಬೇಸಾಕೆ ಸದ್ಯ ಪುಳ್ಳೆ ಇರ್ನಿಲ್ಲ ಕಣ್ರಯ್ಯ"[೫] ಎಂದು ಹೆದರುತ್ತಾ ನಿಂತಳು. ಅವಳ ಮೈಕಟ್ಟು ಇವರನ್ನು ಆಕರ್ಷಿಸಿತು. ಏನು ಮಾತಾಡಬೇಕೆಂದು ತೋಚಲಿಲ್ಲ. ಬೇಡ ಅನ್ನಿಲ್ಲ ತಗ ಎಂದರು. ತೆಂಗಿನಕಾಯಿ ಮತ್ತು ಹಣವನ್ನು ಕೊಟ್ಟು ಎಲ್ಲವನ್ನು ತೆಗೆದುಕೋ ಎಂದರು. ಇವಳಿಗೂ ಸಹ ಅರ್ಥವಾಯಿತು. ತಮ್ಮ ಕೇರಿಯ ಕೆಲವು ಹೆಂಗಸರು ಹಾರುವರ ಹತ್ತಿರ ಮುಟ್ಟಿಸಿಕೊಳ್ಳುತ್ತಿದ್ದರು. ಆದರೆ ಇವರು ಶ್ರೀನಿವಾಸ ಸ್ವಾಮಿಯ ಅರ್ಚಕರು ತನಗೆ ಮತ್ತುಕೇರಿಗೆ ಏನಾದರೂ ಮಾಡಿದರೆ ಗತಿ ಏನು? ಭಯ ಆವರಿಸಿತು. "ನೀವು ಗುಡಿ ಪೂಜೆ ಮಾಡ್ತೀರಲ್ಲಯ್ಯ"?[೬] ಎಂದಾಗ ಮುಖಕ್ಕೆ ಹೊಡೆದಂತಾಯಿತು. ಇವಳಿಗೆ ಏನೆಂದು ಸಮಾಧಾನ ಹೇಳುವುದು? ಸುಮ್ಮನೆ ತಲೆ ತಗ್ಗಿಸಿ ನಿಂತಿದ್ದಳು. ಯಾರು ಕಾಣಾಕ ಬತ್ತಾರೆ ಅಂತ ಹೆದರಕೊತ್ತಿಯೇ ಎಂದು ಹೋಗಿ ಮುಟ್ಟಿಬಿಟ್ಟರು. ಸೋಗೆಯ ಹೊರೆಯನ್ನು ತೆಗೆದುಕೊಂಡು ತನ್ನ ಕೇರಿಯನ್ನು ತಲುಪಿದಳು. ಮರುದಿನವು ಸಂಜೆಯಾಗಿ ಕತ್ತಲಾದ ಮೇಲೆ ತೋಟದ ಸಂದಿನಲ್ಲಿ ಇಬ್ಬರೂ ಮಾತನಾಡುತ್ತಿದ್ದರು. ಮರುದಿನ ಸಂಜೆ ಮಾತಂಗಿ ಪಿಸುಮಾತಿನಲ್ಲಿ ಕೇಳಿದಳು. ದಿನಾ ಬರುತ್ತಿದ್ದರೆ ಯಾರೂ ಕಾಣಾಕಿಲ್ವಾ? ಎಂದಳು.

ವೆಂಕಟರಮಣಯ್ಯನವರು ಕಳ್ಳನ್ನಮಕ್ಕು ನೋಡುವುದರಿಂದ ಅಮವಾಸೆ ಮೊದಲು ಕತ್ಲಿರ್ತೈತೆ ದಿನಾ ಬರೋನಾ. ತಿಂಗಳ ಬೆಳಕು ಇರುವಾಗ ಬರುವುದು ಬೇಡ ಎಂದರು. ಮಾತಂಗಿ ಜೊತೆ ಮೂರು ವರ್ಷ ಕಳೆದಿತ್ತು. ಒಂದು ರಾತ್ರಿ ಮಾತಂಗಿ ಯಡವಟ್ಟಾಗೈತ್ರಲ್ಲಯ್ಯ ಎಂದಳು. ಹಣವನ್ನು ಕೇಳಲು ಪೀಟೀಕೆಯಾಗುತ್ತಿದ್ದಳೆಂದು ಭಾವಿಸಿದರು. ಬಿಮಂಸೆಯಾಗಿರಬಹುದಾ ಎಂದಾಗ ತಲೆಯ ಮೇಲೆ ಕೈಹೊತ್ತು ಕುಳಿತಿರುತ್ತಾನೆ. ಅನಂತರ ಅವಳ ಕೈಹಿಡಿದು "ಮಾತಂಗಿ ನಾನು ಯಾವತ್ತು ನಿನ್ನ ಕೈಮೇಲೆ ಹೊಡೆದಿಲ್ಲ."[೭] ನನ್ನ ಮರ್ಯಾದೆ ಕಾಪಾಡೂದು ನಿನ್ನ ಕೈಯಲ್ಲಿದೆ. ಎಂದಾಗ ಅವಳು "ಅಯ್ಯಾ, ನಿಮ್ಮ ಪಾದ ಬ್ಯಾರೆಯಾ? ಕೆರೆ ಕೆಳಗಿನ ತಿಮ್ಮಪ್ಪನ ಪಾದ ಬ್ಯಾರೆಯಾ?"[೮] ಮರ್ವಾದಿ ಕಳೆಯುವ ಮುಂಡೆಯಲ್ಲ ನಾನು ಎಂದು ಅವನ ಪಾದ ಮುಟ್ಟಿ ಪ್ರಮಾಣ ಮಾಡುತ್ತಾಳೆ. ಎಲ್ಲಿಗೆ ಹೋದಳೋ ಸುದ್ದಿಯೇ ತಿಳಿಯಲಿಲ್ಲ.

ಒಂದು ತಿಂಗಳು ಕಳೆದ ಮೇಲೆ ತಿಳಿಯಿತು, ಶಿವಗೆರೆ ಕೊಪ್ಪಲಿನಲ್ಲಿ ಅವಳ ಜಾತಿಯವನು ಒಬ್ಬ ಹೆಂಡತಿ ಸತ್ತವನಿದ್ದ ಅವನೊಂದಿಗೆ ಸೀರುಡಿಕೆ ಮಾಡಿಕೊಂಡು ಅವನ ಹತ್ತಿರ ಇದ್ದಾಳಂತೆ. ಹೆಗ್ಗಟದ ಅವಳ ಚಿಗವ್ವ ಗೊತ್ತು ಮಾಡಿದ ಕೂಡಿಕೆ ಹದಿನೈದು ದಿನದಲ್ಲಿ ಆಯಿತು. ಮಾತಂಗಿ ತಿರುಮಲಾಪೂರ ಬಿಟ್ಟು ಗುಡ್ಲಿಗೆ ಬೀಗ ಹಾಕಿಕೊಂಡು ಹೋಗಿದ್ದಾಳೆ. ಇಲ್ಲಿಗೆ ಯಾಕೆ ಬಂದಾಳು? ಅವಳು ಬಸುರಿಯಾದ ಸಮಸ್ಯೆ ಹಗುರವಾಗಿ ಬಗೆಹರಿದಿದ್ದಕ್ಕೆ ಅವರಿಗೆ ಸಮಾಧಾನವಾಯಿತು. ಮಾತಂಗಿ ಊರಿಗೆ ಹಿಂತಿರುಗಿದಳು. ಇಲ್ಲಿಂದ ಹೋದ ಅವಳು ಗಂಡನ ಮನೆಯಲ್ಲಿ ಗಂಡು ಮಗು ಹೆತ್ತಳು. ಮಗುವಿಗೆ ಎರಡನೆ ವರ್ಷ ನಡೆಯುತ್ತಿದ್ದಾಗ ಮಗುವನ್ನು ಕರೆದುಕೊಂಡು ತನ್ನ ಹಳೆಯ ಗುಡಿಸಲಿಗೆ ಬಂದಳು. ಗಂಡ ಅತೀ ಕುಡುಕನಾಗಿದ್ದರೂ ನಯ ನಾಜೂಕು ತಿಳಿಯದ ಮಡ್ಡನಾಗಿದ್ದ. ಎಲ್ಲಿ ಹೋದರೂ ದುಡಿಯಬೇಕು. ಸಂಪತ್ತಿಗೆ ಕುಡುಕನ ಸಂಗಡ ಯಾಕೆ ನರಳಬೇಕು ಎಂದು ಊರಿಗೆ ಬಂದಳು. ಅವಳ ಜಾತಿಯಲ್ಲಿ ಕುಡಿಯದೆ ಇರುವವರು ಯಾರು? ಎಷ್ಟು ಜನ? ಅವಳು ಯಾವ ಗಂಡನನ್ನು ಕಟ್ಟಿಕೊಂಡರೂ ಕುಡಿಯುವವನೇ ಆಗಿದ್ದ. ಮದುವೆಯಾದ ಪಟೀಗೆ ಬಸುರಾದ್ಲು ಮಾತಂಗಿ ಎಂದು ಅವಳ ಕೇರಿಯ ಹೆಂಗಸರು ತಮಾಷೆಮಾಡಿ ಗೆಲುವಾಗಿದ್ದ ಮಗನನ್ನು ಎತ್ತಿ ಹೊಗಳಿದ್ದರು.

ಮಾತಂಗಿ ಕೂಲಿ ಮಾಡಿಕೊಂಡು ಮಗುವಿನ ಹೊಟ್ಟೆಯನ್ನು ಸಾಕಬೇಕಿತ್ತು. ಸ್ವಂತ ಮನೆ ಮತ್ತು ದರ್ಖಾಸಿನ ಜಮೀನಿಗೆ ಬೆಟ್ಟಯ್ಯ ಅರ್ಜಿಯನ್ನು ಹಾಕಿದ್ದಾನೆ. ವೆಂಕಟರಮಣಯ್ಯ ತೋಟಕ್ಕೆ ಬಾ ಎಂದಾಗ ಬ್ಯಾಡಿ ಕಣ್ರಯ್ಯಾ ಎಂದು ಹೆಜ್ಜೆಯನ್ನು ಜೋರು ಮಾಡಿದಳು. ಮೊದಲು ಎರಡು ಹೆಜ್ಜೆ ವಾಲಿದರೂ "ಅದ ಮಾಡಬ್ಯಾಡದು ಕಣ್ರಯ್ಯಾ"[೯] ಎಂದು ದೃಢವಾಗಿ ಹೇಳಿದಳು. ಗಾಂಧೀ ಆಶ್ರಮದಿಂದ ಬಂದ ಬೆಟ್ಟಯ್ಯ, ಸುಂಕವ್ವ ಕೂಡಿ ಮಲಗುದಿಲ್ಲವೆಂದು ತಮ್ಮ ಕೇರಿಯವರಿಗೆಲ್ಲರೂ ಅವರನ್ನೇ

ಅನುಸರಿಸುತ್ತಾರೆಂದೂ ಹೇಳುತ್ತಾಳೆ. ಆದರೆ ವೆಂಕಟರಮಣಯ್ಯ "ಅವರೇನೋ ಗಂಡ ಹೆಂಡತಿ ಹೇಗೆ ಬೇಕಾದ್ರು ಮಾಡಿಕೊಳ್ಳಲಿ"[೧೦] ಈಗ ನೀನು ಬಾ ಎಂದು ಅವರು ಅವಳನ್ನು ತಬ್ಬಿಕೊಂಡು ಮುಂದೆ ಹೆಜ್ಜೆಹಾಕಿಸಿದರು. ಹೆಜ್ಜೆಗೆ ಮತ್ತೇ ನಿಂತಿಕೊಂಡು "ಹಾಗಾದ್ರೆ ನಾನೇನು ನಿಮ್ಮ ಸೂಳೆ ಏನ್ರಯ್ಯಾ?"[೧೧] ಎಂದು ಕೇಳಿದಳು. ವೆಂಕಟರಮಣಯ್ಯ ಆಶ್ಚರ್ಯ, ಅವಮಾನದಿಂದ ನಡುಗುತ್ತಾ ನಿಲ್ಲುತ್ತಾನೆ. ಮಾತಂಗಿಯು ಕಣ್ಣಿನಲ್ಲಿ ನೀರು ತುಂಬಿಕೊಂಡು ಅವಳ ಸೆರಗನ್ನು ಎತ್ತಿಕೊಂಡು ಒರೆಸಿಕೊಂಡಿದ್ದನ್ನು ನೋಡಿದರು. ಮಾತಂಗಿ ತಾನು ಮನೆಗೆ ಹೋಗುವುದಾಗೀಯೂ, ದಾರಿಯಲ್ಲಿ ಬೇಟಿಯಾದರೂ ಮಾತನಾಡಿಸಬಾರದೆಂದು, ನಿಮ್ಮ ಮರ್ಯಾದೆ ಹೋಗಬಾರದೆಂದೂ ಹೇಳಿ ಹೊರಟು ಹೋದಳು.

ಮಂಡ್ಯದ ಕೆಂಪಣ್ಣಗೌಡರ ಮಗಳು ಕುಮದಿನಿ ಶ್ರೀನಿವಾಸನೊಂದಿಗೆ ಅದ್ದೂರಿಯಾಗಿ ವಿವಾಹವಾಯಿತು. ವೆಂಕಟರಮಣಯ್ಯ ಮಾತಂಗಿಯ ಹುಚ್ಚಿನಿಂದಾಗಿ ಗುಡಿ ಪೂಜೆಯನ್ನು, ಗೃಹ ಕರ್ತವ್ಯವನ್ನು ತ್ಯಜಿಸಿ ತೋಟದಲ್ಲಿಯೇ ವಾಸಿಸುತ್ತಾನೆ. ಆದರೆ ಮಾತಂಗಿಯನ್ನು ಮರೆಯುವುದು ಅಸಾಧ್ಯವಾಗಿ ಒಂದು ದಿನ ರಾತ್ರಿ ಅವಳ ಕೇರಿಗೆ ಹೋದನು. ಬೆಂಕಿಯನ್ನು ಕಾಯಿಸುತ್ತಿದ್ದ ಜನರುಗಳೆಲ್ಲ ಹುಚ್ಚುನಾಯಿ ಕೇರಿಗೆ ಬಂದಿದೆ. ಲಕ್ಷ್ಮಿ ಕದಿಯಾಕೆ ಮಡುಗು ತೊಪ್ಪೆಯಾಗೆಂದು ಕಿರುಚಿದ ಸಗಣಿ ತೊಪ್ಪೆಗಳಲ್ಲಿ ತಲೆ, ಮುಖ, ಬೆನ್ನು, ಭುಜ, ಕಾಲು ಮತ್ತು ಮೊಣಕಾಲುಗಳೆಲ್ಲ ಆದದ್ದೂ ಮಾತ್ರವಲ್ಲ ಹಸಿ ಸಗಣಿಯು ಬೀಸಿಬಂದು ಬಿದ್ದ ರಭಸಕ್ಕೆ ಮೈಕೈಗಳಿಗೆ ನೋವಾಯಿತು. ಬೇಗಬೇಗ ಹೆಜ್ಜೆ ಹಾಕುವಾಗ ನಾಯಿಮೇಲೆ ಬಿದ್ದು ಮೊಣಕಾಲಿನ ಮೀನುಕಂಡಕ್ಕೆ ಹಲ್ಲುಹಾಕಿಬಿಟ್ಟಿತು. ಆ ಜಾಗದಲ್ಲಿ ರಕ್ತ ಬರುತ್ತಿತ್ತು. ಅದನ್ನು ಲೆಕ್ಕಿಸದೇ ತೋಟದ ಗುಡಿಸಲಿಗೆ ಬರುತ್ತಾನೆ. ವಿಷಯ ತಿಳಿದ ಮಾತಂಗಿ ಬಂದು "ಕಳ್‌ನನ್‌ಹೆಂಡ್ತಿಮಗನ ನಾಯಿ ಹೆಂಗ ಕಚ್ಚಿದೆ ನೋಯ್ತಾಯಿದೇನ್ರಯ್ಯಾ?[೧೨] ಎಂದು ಕೇಳಿದಳು. ಬೇಲಿಯ ಹತ್ತಿರ ಹೋಗಿ ಹುಡುಕಿ ಎಳೇ ಚದುರಂಗದ ಸೊಪ್ಪು ತಂದು ತನ್ನ ಅಂಗೈಗೆ ಹಾಕಿಕೊಂಡು ಬಲಗೈಯಿಂದ ತಿಕ್ಕಿ ರಸ ಹೊರಡಿಸಿ ಗಾಯದ ಮೇಲೆ ತಂದು ಒಂದು ಸಲ ಬಲವಾಗಿ ಹಿಂಡಿದಳು. ತಟ ತಟನೆ ಬಿದ್ದ ಹಸಿರು ರಸದಿಂದ ಉರಿಹತ್ತಿದಂತಾಗಿ ಅವರು ಹಾ ಎಂದರು. ಕೈಲಿಂದ ಹೊಸಗಿದ್ದ ಸೊಪ್ಪನ್ನು ಗಾಯಕ್ಕೆ ಮೆತ್ತಿ ತನ್ನ ಸೀರೆಯ ಸೆರಗನ್ನು ಹಲ್ಲಿನಿಂದ ಕಚ್ಚಿ ಒಂದು ಪಟ್ಟೆ ಹರಿದು ಕಟ್ಟಿದಳು. ವೆಂಕಟರಮಣಯ್ಯನ ಗುಡಿಸಲಿನಲ್ಲಿದ್ದ ಖಾಲಿ ಪಾತ್ರೆಗಳನ್ನು ನೋಡಿ ಅವನ ಇಂದು ಅಡುಗೆ ಮಾಡಿದ್ದಂತಿಲ್ಲವೆಂದು ತಿಳಿದು "ಈಗ ಬೋನ ಬೇಯಿಸಲೇನಯ್ಯ"[೧೩] ಎಂದಾಗ ತಿನ್ನಬಹುದೋ, ಬಾರದು! ಎಂಬ ಪ್ರಶ್ನೆ ತಲೆಯಲ್ಲಿ ಹುಟ್ಟಿತು. ಯೋಚಿಸುತ್ತ ಕುಳಿತರು. ಎರಡು ಸಲ ಕೇಳಿದರು ಅವನು ಮಾತನಾಡದಿರಲು ಮಾತಂಗಿಯು "ನಮ್ತಾವ ಮನಿಕತೀರಾ, ನಾವು ಮಾಡಿದ್ದು ಯಾಕೆ ಉಣ್ಣಕಿಲ್ವಾ"?[೧೪] ಎಂದಾಗ ಈ ಮಾತನ್ನು ಕೇಳಿ ವೆಂಕಟರಮಣಯ್ಯನು ಬೆಚ್ಚುತ್ತಾನೆ. ಹಣೆ ಮತ್ತು ಕುತ್ತಿಗೆಯು ಬೆವೆತವು.

ಕಾಲೇಜಿನಲ್ಲಿ ಕೆಲಸ ಹೋದ ಮೇಲೆ ಸತ್ಯಭಾಮೆ ಚಿಕ್ಕಪೇಟೆಯ ಸತ್ಯನಾರಾಯನ ಹಾಲ್ ಎಂಬ ಜವಳಿ ಅಂಗಡಿಯಲ್ಲಿ ತಿಂಗಳಿಗೆ ೧೦೦ ರೂಪಾಯಿ ಸಂಬಳದ ಮೇಲೆ ಸೇಲ್ಸ್ ಗರ್ಲ್‌ಆಗಿ ಕೆಲಸಕ್ಕಾಗಿ ಸೇರಿಕೊಂಡು ಹೇಗೋ ಬದುಕು ಸಾಗಿಸುತ್ತಿದ್ದಳು. ಬೆಟ್ಟಯ್ಯನವರು ಒಂದು ದಿನ ನೋಡಿದಾಗ ಇವಳು ನನ್ನ ವಿಷಯ ಊರಲ್ಲಿ ಯಾರ ಕಡೆ ಏನೂ ಹೇಳಬೇಡ ಎಂದಿದ್ದರು. ಆದರೂ ಸಹ ಮನಸ್ಸು ತಡೆಯದೇ ಬೆಟ್ಟಯ್ಯನವರು ಅರ್ಚಕರಿಗೆ ತಿಳಿಸಿದರು. ಆದರೆ ಇಬ್ಬರೂ ಸಹ ಮಗಳನ್ನು ನೋಡುವುದಕ್ಕೆ ಜವಳಿ ಅಂಗಡಿಗೆ ಬಂದರು. ಅವರನ್ನು ಕಂಡು ಆಶ್ಚರ್ಯ ಮತ್ತು ಗಾಬರಿಯಾಯಿತು. ತಂದೆಯ ದೇಹದ ಲಕ್ಷಣಗಳನ್ನು ನೋಡಿ ಕರಳು ಚುರುಕ್ ಎಂದಿತು. ಅವಳೂ ಸಹ ಸನ್ನಿಪಾತ ಜ್ವರ ಬಂದು ಎದ್ದವಳಂತೆ ಕಾಣುತ್ತಿದ್ದಾಳೆ. ರೂಂಗೆ ಹೋಗೋಣ ಬಾ ಎಂದಾಗ ಶೆಟ್ಟರು ಒಪ್ಪಿಕೊಳ್ಳಲಿಲ್ಲ. ಆದರೂ ಸಹ ಸಂಜೆ ೫ರ ವೇಳೆಗೆ ಬರ್ತೀನಿ ಎಂದು ಕೇಳಿ ಒಪ್ಪಿಗೆ ಪಡೆದು ಕರೆದುಕೊಂಡು ಬಂದಳು. ಊಟವನ್ನು ಮಾಡುವಾಗ ತಕ್ಷಣ ಕಣ್ಣಿನಲ್ಲಿ ನೀರು ತುಂಬಿಕೊಂಡಿತು. ಸೂಳೆಮಗನ ಕಾಲೇಜಿನ ಕೆಲಸಹೋದಮೇಲೆ ಸೀದಾ ಊರಿಗೇಕೆ ಬರಲಿಲ್ಲ? ಎಂದರು. ಬಚ್ಚಲು ಮನೆಗೆ ಹೋಗಿ ನಿಂತು ಅತ್ತು ಕಣ್ಣೀರು ಒರೆಸಿಕೊಂಡು ಬಂದಳು. ನನ್ನ ಮೇಲೆ ಹಟಮಾಡಬಹುದೇ ನೀನು ಎಂದರು. ಸ್ವಾಭಿಮಾನ ಒಡೆಯುವ ನಾಚಿಕೆ ಕಳೆದು ಅವಳು ಬಿಕ್ಕಿ ಬಿಕ್ಕಿ ಅತ್ತುಬಿಟ್ಟಳು. ಸೂಳೆಮಗ ನಿನ್ನ ನಂಬಿಸಿ ಸುಖವಾಗಿ ಬೇರೆ ಮದುವೆ ಮಾಡ್ಕೊಂಡ್ನಲ್ಲ ಎಂದರು. ಗಂಡು ಹುಡುಕಿ ಮದುವೆ ಮಾಡ್ತೀನಿ ಎಂದಾಗ, ಬ್ಯಾಡಪಾ ಎಂದಳು. ವೆಂಕಟರಮಣಯ್ಯನವರು ಹಣವನ್ನು ತಗೋ ಮಂಚದಮ್ಯಾಲೆ ಇಟ್ಟಿನಿ. ಒಳ್ಳೆ ಬಟ್ಟೆಬರೆಯನ್ನಾದರೂ ಮಾಡೆಂದರು. ಅಪ್ಪ ನನಗೆ ಬೇಡ ಆರು ಕಾಸು, ಮೂರುಕಾಸು ಸಂಬಳ ಬರ್ತಿದೆಯೆಲ್ಲಾ, ಎಂದಾಗ ಮಾತಿಗೆ ಸಿಟ್ಟುಬಂದು ಬರ್ತಿದೆಯಂತೆ ಈ ಕತ್ತೆ ಲೌಡಿಗೆ. ನಾನು ಹುಟ್ಟಿಸಿ ಸಾಕಿ ಸಲುಹಿ ಮಾಡಿದ್ದಕ್ಕೆ ಬೇಡ ಅಂತಾಳೆ ಎಂದರು. ಸತ್ಯಭಾಮಳಿಗೂ ತಮ್ಮ ಸ್ವಂತ ಆಸ್ತಿಯಲ್ಲಿ ಅರ್ಧ ಭಾಗ ಮಾಡಿಸಿದರೂ ಎಲ್ಲಿ ಕೆಲಸ ಮಾಡ್ತಿದ್ದೀನಿ ನಿಮಗೆ ಸಂಬಂಧ ಪಟ್ಟದ್ದೆಲ್ಲ ನಿಮ್ಮ ರೂಮಂತೂ ಬಿಡಲ್ಲ. ದುಡ್ಡಿಗೆ ರಸೀದಿಕೊಡಿ ಎಂದು ಮುಖಕ್ಕೆ ಹೊಡೆದಂತೆ ಹೇಳಿದಳು. ಕಲಿತ ವಿದ್ಯೆಗೂ ದುಡಿಮೆಗೂ ಏನು ಸಂಬಂಧ? ಯಾರ ಸ್ವಾರ್ಥಕ್ಕೆ ಎಂಬ ಪ್ರಶ್ನೆ ಮನಸ್ಸಿನಲ್ಲಿ ಬಂದರೂ ಸಹ ಜೀವನಕ್ಕೆ ಕಷ್ಟವಾಗಿರಲಿಲ್ಲ.

ತಂದೆಗೆ ಕಾಯಿಲೆಯಾಗಿದೆ ಊರಿಗೆ ಹೋಗಬೇಕು ಎಂದು ಶೆಟ್ಟರಿಗೆ ಹೇಳಿ ನೇರವಾಗಿ ಮನೆಗೆ ಬಂದಳು. ವೆಂಕಟರಮಣಯ್ಯನವರು ಮನೆಯಲ್ಲಿ ಇರ್ಲಿಲ್ಲವಾದ್ದರಿಂದ ವೆಂಕಟೇಶನ ಜೊತೆಯಲ್ಲಿಯೇ ತೋಟದ ಗುಡಿಸಲಿಗೆ ಬಂದಳು. ತನ್ನ ಮಗಳಿಗೆ ಯಜ್ಞೋಪವಿತಧಾರಣೆಯನ್ನು ಮಾಡಿ ಮಂತ್ರವನ್ನು ಬೋಧಿಸಿದರು. ಸತ್ಯಭಾಮಾ ದೇವಸ್ಥಾನದ ಕಡೆಗೆ ಹೋಗುವ ಹೊತ್ತಿಗೆ ವೆಂಕಟರಮಣಯ್ಯ ಗುಡಿಯ ಹತ್ತಿರ ದಿಬ್ಬದ ಮೇಲೆ ಹೋಗಿ ನಿಂತಿದ್ದರು. ಅದೇ ವೇಳೆಗೆ ಸರಿಯಾಗಿ ವೃದ್ಧ ಪಟೇಲ್ ತಿರುಮಲೆ

ಗೌಡರು ಅವರ ಸೊಸೆ ರಂಗಮ್ಮ, ಶ್ರೀನಿವಾಸ ಮತ್ತು ಅವನ ಹೆಂಡತಿ ಕುಮುದಿನಿಯು ಬಸುರನ್ನು ಹೊತ್ತು, ತುಂಬು ಹೊಟ್ಟೆಯ ಮೇಲೆ ನಯವಾದ ಹಳದಿ ರೇಷ್ಮೆ ಸೀರೆಯು ನೆರಿಗೆಗಳು ಇಳಿದಿವೆ. ಹಿಂಭಾಗದಲ್ಲಿದ್ದವನು ಶ್ರೀನಿವಾಸನು ಗುಡಿಗೆ ಪೂಜೆ ಮಾಡಿಸಲು ಬರುತ್ತಿದ್ದರು. ಸತ್ಯ ಅವರ ಕಡೆ ತಿರುಗಿದಳು. ವೆಂಕಟರಮಣಯ್ಯ ಇವರನ್ನು ನೋಡಿದ್ದೇ ತಡ ಕೈಲಿ ಪೂಜಾ ದ್ರವ್ಯಗಳನ್ನು ಹಿಡಿದು ನಿಧಾನವಾಗಿ ನಡೆಯುತ್ತಿದ್ದ. ಬಸುರಿ ಹೆಂಗಸಿನ ಕಡೆ ಕೈತೋರಿಸಿ ಕಿರುಚಿದರು. "ಈ ಗರ್ಭ ಉಳಿಯುದಿಲ್ಲ, ಈ ಬೀಜ ಮೋಳೆಯೊಲ್ಲ ಈ ತಳಿ ಬೇಳೆಯೊಲ್ಲ"[೧೫] ಇದೇ ಮಾತನ್ನು ಮಂತ್ರಹೇಳಿದಂತೆ ಮತ್ತೆ ಮತ್ತೆ ಗಟ್ಟಿಯಾಗಿ ಒದರುತ್ತಿದ್ದರು. ರಂಗಮ್ಮ ಮತ್ತು ಅವಳ ಸೊಸೆ ಇಬ್ಬರೂ ಸ್ತಂಬೀ ಭೂತರಾದರು.

ದೊಡ್ಡಗೌಡರ ಕೈಲಿದ್ದ ಬೆತ್ತವನ್ನು ಮೇಲೆತ್ತಿ "ಕೆಟ್ಟ ಮಾತಾಡ್ತಿಯಾ? ಹುಚ್ಚ ನಾಯಿ! ಗುಡಿತಾವ್ಲಿಂದ ಹೋಯ್ತಿಯೋ, ನಿಂಗೆ ಕಾಲು ಮುರಿಗಂಟ ಮಡುಗಬೇಕೋ"?[೧೬] ಎಂದು ಗದರಿಸಿರು. ಅಷ್ಟರಲ್ಲಿ ಸತ್ಯಭಾಮೆ ಅವರ ಹತ್ತಿರ ಹೋಗಿ ಅವರ ಕೈಹಿಡಿದು "ಅಪ್ಪ ಇಂತಹ ಮಾತು ನಿನ್ನ ಬಾಯಲ್ಲಿ ಬರಬಾರದು ಆಶ್ರಮಕ್ಕೆ ಹೋಗೋಣ ಬಾ"[೧೭] ಎನ್ನುತ್ತಾ ಅವರನ್ನು ಗುಡಿಸಲಿಗೆ ಕರೆದುಕೊಂಡು ಹೋದಳು. ಕುಮುದಿನಿಯ ತುಂಬಿದ ಹೊಟ್ಟೆಯನ್ನು ನೋಡಿದ ಸತ್ಯಭಾಮಳ ಕಣ್ಣು ಹನಿಯೊಡಿಯಿತು. ಒಂದು ನಿಮಿಷ ಬಿಕ್ಕಿ ಬಿಕ್ಕಿ ಅತ್ತು ಬಿಟ್ಟಳು. ಅಪ್ಪನ ಕೆಟ್ಟ ಮಾತು ಸುಳ್ಳಾಗಲಿ, ಯಾರಿಗೂ ಕೇಡಾಗುವುದು ಬೇಡಾ ಎಂದು ತನ್ನಲ್ಲಿ ತಾನೇ ಹೇಳಿಕೊಂಡಳು. ಮಾತಂಗಿಗೆ ಕೊಡಬೇಕು ಎಂದು ಎರಡು ಸಾವಿರ ರೂಪಾಯಿಯನ್ನು ಇಟ್ಟುಕೊಂಡಿದ್ದರು. ಅವರು ಸತ್ತ ಮೇಲೆ ನಮಗೆ ಆ ದುಡ್ಡು ಬೇಡ, ಮಾತಂಗಿಗೆ ಕೊಡು ಎಂದಿದ್ದರು. ಅದರಿಂದಲೇ ನಿನ್ನನ್ನು ಕರೆಸಿದ್ದೇವೆ ಎಂದಳು. ಅವ್ವ ನಂಗೂ ಅಯ್ಯಾರಿಗೂ ಸಂಬಂಧವಿತ್ತು ಅಂತ ಯಾರಕಡೆಗೂ ಹೇಳಬೇಡಿ ಸತ್ತಮೇಲೆ ಸಹ ಅವರ ಮರ್ಯಾದೆ ಹೋಗಬಾರದು ಸತ್ಯ ಹಣವನ್ನು ಅವಳ ಸೆರಗಿಗೆ ಕಟ್ಟಿ ಗಂಟು ಹಾಕಿ ಹೇಳಿದಳು. ನಿನಗೆ ಸೇರಬೇಕು ಎಂದು ಅಯ್ಯಾರು ಹೇಳಿದ್ದು ನೀನು ಬೇಡ ಎಂದರೆ ಅವರ ಜೀವ ಸ್ವರ್ಗಕ್ಕೆ ಹೋಗುವುದು ಬೇಡವೋ? ಇಟ್ಟುಕೊಂಡು ಒಡವೆ ಗಿಡವೆ ಮಾಡಿಸು. ಎಂಥಾ ಮಾತು ಆಡಬಾರದು. ಸತ್ತಮ್ಯಾಲೆ ನಂಗೆಂಥಾ ಒಡವೆ? ಎಂದಳು.

ಸತ್ಯಭಾಮಳು ಮಾತಂಗಿಗೆ ಅಡುಗೆ ಮಾಡಿದಿನಿ ಊಟ ಮಾಡು ಎಂದಳು. ಬೇಡ ಎಂದರೂ ಬಿಡದೇ ಊಟವನ್ನು ಮಾಡಿ ಹೊರಟು ಹೋದಳು. ಮೀರಾ ಪ್ರಾಥಮಿಕ ಶಾಲೆಯಲ್ಲಿ ಶಿಕ್ಷಕಿಯಾಗಿದ್ದಾಗ ಅನುಭವಗಳನ್ನು ಸತ್ಯಭಾಮಳಜೊತೆ ಹಂಚಿಕೊಂಡಳು ಮತ್ತು ತಮಾಷೆಯ ಮಾತುಗಳನ್ನು ಆಡಿದಳು. ಕುಮುದಿನಿಯ ಹುಚ್ಚು ಬ್ರಾಹ್ಮಣ ಆಡಿದ ಕೆಟ್ಟ ಮಾತು ತನಗೆ ತಗುಲದಿರಲಿ ಎಂದು ದೇವರನ್ನು ಪ್ರಾರ್ಥಿಸಿಕೊಂಡಳು. ರಂಗಮ್ಮ ಸೊಸೆಗೆ ಸಮಾಧಾನ ಹೇಳಿದರೂ ಸಹ ತಾನೇ ಮನಸ್ಸಿನಲ್ಲಿ

ಅಸಮಾಧಾನವಾಗಿದ್ದಾಳೆ. ಅಡಿಗೆ ಮನೆಯಲ್ಲಿಯೇ ಇದ್ದ ನಿಂಗಮ್ಮನ ಜೊತೇಲಿ ಕುಮುದಿನಿ ಮಾತನಾಡುತ್ತಾ ಕುಳಿತಿದ್ದಳು. ದೇವಸ್ಥಾನದ ಹತ್ತಿರ ನಡೆದ ಘಟನೆಯನ್ನು ವಿವರಿಸಿ ಕೇಳಿದಳು. ನಿನ್ನೆ ಆ ರೀತಿ ಮಾತನಾಡಬೇಕಾದರೆ ಅವರಿಗೆ ಏನು ದ್ವೇಷವಿತ್ತು? ಎಂದಳು. ಅವರ ಮಗಳನ್ನು ಮಾಡ್ಕಳ್ಳಿಲ್ಲ ಎಂದು ಕೋಪ ಇರಬಹುದು ಎಂದು ನಿಂಗಮ್ಮ ತಕ್ಷಣ ಹೇಳಿ ನಾಲಿಗೆಯನ್ನು ಕಡಿದುಕೊಂಡಳು. ಕುಮುದಿನಿಗೆ ಅನುಮಾನವಾಯಿತು. ಬಲವಂತ ಮಾಡಿ ಕೇಳಿದಳು. ಅವಳ ಕೈ ಹಿಡಿದು "ಅತ್ತೆ ನಿಮ್ಮಾಣೆ ನಾನು ಯಾರ ಜೊತೆ ಮಾತನಾಡುವುದಿಲ್ಲ, ನಿಜ ಹೇಳಿ"[೧೮] ಎಂದಳು.

ಚೆಂದವಾಗಿರುವ ಬ್ರಾಹ್ಮಣ ಹುಡುಗಿಯಂತೆ ಮಾತನಾಡುವ ಬಿಳಿ ಸಕ್ಕರೆ ಕಂಪನಿ ಮನೆಯ ಹುಡುಗಿ ತನ್ನ ಕೈಹಿಡಿದು ಕೇಳಿದ್ದರಿಂದ ಮನಸ್ಸು ಇಳಿಬಿತ್ತು. ಶ್ರೀನಿವಾಸ ಮತ್ತು ಪೂಜಾರಯ್ಯರ ಮಗಳ ವಿಷಯವಾಗಿ ಎಲ್ಲವನ್ನೂ ಹೇಳಿಬಿಟ್ಟಳು. ಎಷ್ಟೇ ತಾಳ್ಮೆಯಿಂದಿರಬೇಕೆಂದು ಪ್ರಯತ್ನಿಸಿದರೂ ಕೇಳುತ್ತಾ ಕುಮುದಿನಿ ಆಳು ಬರುತ್ತಿತ್ತು. ಇವಳ ಎದುರಿಗೆ ಅಳಬಾರದೆಂದು ತಡೆದುಕೊಂಡಳು. ಸ್ವಲ್ಪ ಹೇಳಬೇಕಂದು ಆರಂಭಿಸಿದ ನಿಂಗಮ್ಮ ಹೇಳುತ್ತಾ ಹೇಳುತ್ತಾ ತನಗೆ ತಿಳಿದುದ್ದನೆಲ್ಲ ಹೇಳಿ ಬಿಟ್ಟಳು. ಶ್ರೀನಿವಾಸ ಮಾಡ್ಕಬೇಕು ಅಂತಿದ್ದ. ಆದರೆ ತಂದೆ ತಾಯಿಯವರು ಅವಳೊಂದಿಗೆ ಮದುವೆಗೆ ಒಪ್ಪಿಕೊಂಡಿರಲಿಲ್ಲ ಮದುವೆ ಬೇಡ ಎಂದು ಮೈಸೂರಿಗೆ ಹೋಗಿದ್ದ ಗಂಡನ ಮೇಲೆ ಸಂಶಯ ಮಾತ್ರ ಹೋಗಲಿಲ್ಲ ಮೋಸ ಮಾಡಿದ ಖಳನಾಯಕನಂತೆ ಕಾಣುತ್ತಿದ್ದಾನೆ. ಗಂಡನ ಹತ್ತಿರ ಮಾತನಾಡಲೇ ಬಾರದೆಂದು ಅವಳು ನಿರ್ಧರಿಸಿಕೊಂಡಳು. ಆದರೂ ಕೋಪ ಬಂದು ಅವನ ತೋಳನ್ನು ಹಿಡಿದು ಕೇಳಿದಳು. ನನಗ್ಯಾಕೆ ಅನ್ಯಾಯ ಮಾಡಿದಿರಿ? ಚಂಡಾಲರು ನೀವು ಎಂದಳು.

ನೆನ್ನೆಯಿಂದ ನೀವು ಯಾವಳನ್ನು ಕುರಿತು ಯೋಚಿಸುತ್ತಿದ್ದೀರ ಹೇಳಿ ಗೊತ್ತಾಗುತ್ತೆ ಎಂದಾಗ ಅವನು ಕಕ್ಕಾಬಿಕ್ಕಿಯಾದನು. ಅವನಿಗೆ ಯಾವುದನ್ನು ಹೇಳಲು ತಿಳಿಯಲಿಲ್ಲ. ಶ್ರೀನಿವಾಸನ ತೋಳನ್ನು ನೂಕಿ ಮಂಚದ ಕಟ್ಟಿಗೆ ತಲೆಕೊಟ್ಟು ಅವಳು ಬಿಕ್ಕಿ ಬಿಕ್ಕಿ ಅಳಲು ಪ್ರಾರಂಭಿಸಿದಳು. ಹತ್ತಿರ ಹೋಗಿ ಸಮಾಧಾನ ಪಡಿಸಲಿಲ್ಲ. ತವರು ಮನೆಗೆ ಕರೆ ಮಾಡಿ ನಿಮ್ಮನ್ನು ನೋಡಬೇಕು ಅನ್ನಿಸಿದೆ ಎಂದಳು. ಚೊಚ್ಚಲ ಬಸುರಿಯನ್ನು ಆರನೆಯ ತಿಂಗಳದರೂ ನಮ್ಮನೆಗೆ ಕರೆದುಕೊಂಡು ಬಂದಿಲ್ಲವೆಂದು ಎಚ್ಚರವಾಯಿತು. ಕೆಂಪಣ್ಣಗೌಡರು ಮಗಳಿಗೆ ಇವತ್ತೆ ಬರುತ್ತೇನೆ ಎಂದು ತಿರುಮಲಾಪುರಕ್ಕೆ ಬಂದು ಕರೆದುಕೊಂಡು ನೀವೂ ಬನ್ನಿ ಎಂದು ಅಳಿಯನಿಗೆ ಹೇಳಿ ಹೊರಟು ಹೋದರು. ತಂದೆಗೂ ಮಗಳ ದುಃಖದ ಕಾರಣ ತಿಳಿಯುತ್ತದೆ. ಅವರು ಬಂದು ಮೇಲಗಿರಿ ಗೌಡರಿಗೆ ಹೇಳಲು ಶ್ರೀನಿವಾಸ ಮಂಡ್ಯಕ್ಕೆ ಹೋಗಿ ಹೆಂಡತಿಯನ್ನು ಸಮಾಧಾನ ಪಡಿಸಲು ಯತ್ನಿಸುತ್ತಾನೆ. ಆದರೆ ಅವಳು ಬಿಕ್ಕಿ ಬಿಕ್ಕಿ ಅಳುತ್ತಾ ಆ ಮುದುಕನ ಮಾತು ನಿಜವಾಗುತ್ತೆ. ಈ "ಹೇರಿಗೇಲಿ ನಾನೂ ಉಳಿಯೊಲ್ಲ ಮಗುವೂ ಉಳಿಯುಲ್ಲ ನಾನು

ಸತ್ತ ಮೇಲೆ ನೀವು ಅವಳನ್ನೇ ಮದುವೆಯಾಗಿ ಸುಖವಾಗಿರಿ"[೯] ಎಂದು ಹೇಳುತ್ತಾಳೆ. ಮೇಲಗಿರಿಗೌಡರು ಬಂದು ಸಮಾಧಾನ ಹೇಳಿದರೂ ಕುಮುದಿನಿ ಅದೇ ಮಾತನ್ನೇ ಹೇಳುತ್ತಾಳೆ.

ಕುಮುದಿನಿಗೆ ಆರು ತುಂಬಿ ಏಳು ತಿಂಗಳು ನಡೆಯುತ್ತಿದ್ದಾಗ ಇದ್ದಕ್ಕಿದಂತೆ ಹೊಟ್ಟೆನೋವು ಕಾಣಿಸಿಕೊಳ್ಳುತ್ತದೆ. ತಕ್ಷಣ ಆಸ್ಪತ್ರೆಗೆ ಸೇರಿಸುತ್ತಾಳೆ. ಸರ್ಕಾರಿ ವೈದ್ಯರು ಬಂದು ನೋಡಿದರು. ಪೂರ್ತಿಬಲಿಯುವ ಮುನ್ನವೇ ಹೆರಿಗೆಯಾಗಿ ಮಗು ಸಾಯುತ್ತದೆ ಅನಂತರ ರಕ್ತಸ್ರಾವನ್ನು ತಡೆಯಲಾರದೆ ಕುಮುದಿನಿ ಹೆಣಗುತ್ತಿದ್ದಳು. ಪ್ರಜ್ಞೆ ತಪ್ಪಿತು ಬೆಂಗಳೂರಿನಿಂದಲೂ ಉಪಮಂತ್ರಿಗಳು ತಜ್ಞ ಲೇಡಿ ವೈದ್ಯರನ್ನು ಕರೆದುಕೊಂಡೇ ಹೋಗುತ್ತಾರೆ. ವೈದ್ಯರು ಸಹ ಪ್ರಯತ್ನಮಾಡುತ್ತಿದ್ದೇವೆ ಉಳಿದರೆ ಅದೃಷ್ಟ ಎಂದು ಹೇಳಿದರು. ಲೇಡಿ ವೈದ್ಯರು ಒಳಗೆ ಹೋಗಿ ನೋಡಿದರು. ಕುಮುದಿನಿಯೂ ಸಾಯುತ್ತಾಳೆ, ಇಂತವರಿಗೆ ಮೊದಲ ಹೆರಿಗೆ ಅಪಾಯವೆಂದು ಲೇಡಿ ವೈದ್ಯರು ಹೇಳಿದರು. ಮುಖ್ಯವಸ್ತುವೇ ಹೋದ ಮೇಲೆ ಶ್ರೀನಿವಾಸನಿಂದ ಆಗಬೇಕಾದ್ದೇನು? ಸತ್ಯಭಾಮಳು ಶೂದ್ರ ಹೆಂಗಸಿನಂತೆ ಶ್ರಮ ವಹಿಸಿ ಕೆಲಸವನ್ನು ಮಾಡುತ್ತಿದ್ದಳು. ವೆಂಕಟೇಶನ ಹೆಂಡ್ತಿಯಾದ ಜಯಮ್ಮನು ಬಾಣಂತಿತನಕ್ಕೆ ತವರೂರಿಗೆ ಹೋಗಿದ್ದಾಗ ನಮ್ಮ ಮನೆಗೆ ಹಿತ್ತಿಲು ಬಾಗಿಲಿನಿಂದ ಹಜಾಮರ ರುದ್ರಿ ಬರುತ್ತಿದ್ದಾಳಂತೆ ಜಯಮ್ಮ ಅವಳನ್ನು ಸೂಳೆಮುಂಡೆ ಎಂದಳು.

ಸತ್ಯಭಾಮಳು ತಿರುಮಲಾಪುರದಲ್ಲಿ ನಡೆಯುವ ಜಾತಿ ಗಣತಿಯ ಸಭೆಯಲ್ಲಿ ಸೇರಿಕೊಂಡಳು. ವೆಂಕಟೇಶನು ಮತಗಳ ಅಂತಸ್ತು ನಿರ್ಣಯವಾಗುವುದು ಸಭೆಯಲ್ಲಿ ಎಂದನು. ಸತ್ಯಭಾಮಳು ಸಭೆಯಿಂದ ಎದ್ದು ಬಂದು ಎಲ್ಲಾ ಜನರಿಗೆ ಕೇಳುವಂತೆ ಗಟ್ಟಿಯಾಗಿ ಹೇಳಿದಳು. ಬ್ರಾಹ್ಮಣರಾಗಬೇಕು ಎಂದು ಯಾವ ಮತದವರು ಬಯಸಿದ್ದಾರೋ ಅವರೆಲ್ಲರೂ ಬ್ರಾಹ್ಮಣರು. ಇದಕ್ಕೆ ಎರಡನೇ ವ್ಯಕ್ತಿಯ ಒಪ್ಪಿಗೆ ಬೇಕಾಗಿಲ್ಲ ಮತ್ತು ಯಾವ ಸಭೆಯು ನಿರ್ಣಯಿಸುವ ಅಗತ್ಯವಿಲ್ಲ ಎಂದಾಗ ಜನರೆಲ್ಲರೂ ಸ್ತಬ್ಧರಾದರು ಬುದ್ದಿಗಿದ್ದಿ ನೆಟ್ಟಗಿದೆಯೋ ಇಲ್ಲವೊ? ಎಂದು ಪಕ್ಕದಲ್ಲಿ ನಿಂತಿದ್ದ ವೆಂಕಟೇಶ ಕೇಳಿದ. ಸತ್ಯಭಾಮಳಿಗೆ ವಾಸ್ತವತೆಯ ಪ್ರಜ್ಞೆ ಬಂದು ತಾನೂ ಎಲ್ಲಿದ್ದೇನೆ ಏನು ಆಡಿದ್ದೇನೆ ಎಂಬ ನೆನಪಾಯಿತು. ಜನರೇದುರು ಸಕ್ರಿಯಳಾಗಿ ನಿಂತಿರುವ ಅರಿವುಂಟಾಯಿತು. ಕೆಳಗೆ ಹೋಗಿ ಜಾಗದಲ್ಲಿ ಕುಳಿತುಕೊಳ್ಳಬೇಕೇನಿಸಿತು. ಆದರೂ ಸಹ ಅವಳಲ್ಲಿ ವಿರೋಧ ಶಕ್ತಿ ಹುಟ್ಟಿತು. ಜನರಿಗೆ ಸತ್ಯವನ್ನು ಹೇಳುತ್ತಾ ಗಂಡಸರು ಹೆಂಗಸರಾದಿಯಾಗಿ ಎಲ್ಲರಿಗೂ ಬ್ರಹ್ಮೋಪದೇಶ ಮಾಡುತ್ತೇನೆ ಎನ್ನುವ ಅಧಿಕಾರವಿದೆ. ಅಧಿಕಾರ ಕೇಳಿದರೆ ಸಿಕ್ಕುವುದಿಲ್ಲ ಚಲಾಯಿಸಬೇಕು ಎನ್ನುತ್ತಾಳೆ. ನಮ್ಮ ತಂದೆ ತೋಟದ ಆಶ್ರಮದಲ್ಲಿ ಹವನ ಮಾಡುತ್ತಿದ್ದಾಗ ತನಗೆ ಬ್ರಹ್ಮೋಪದೇಶ ಮಾಡಿದರು. ಸಾಕ್ಷಿಗೆ ಇಲ್ಲಿ ನೋಡಿ ಎಂದು ಕೊರಳಲಿದ್ದ ಜನಿವಾರವನ್ನು ತೋರಿಸಿದಳು. ನನಗೆ ಯಜ್ಞೋಪವೀತ ಧಾರಣೆಯಾಗಿದೆ ಇದೇ

ದೇವಸ್ಥಾನದ ಮುಂದೆ ಹವನ ಕುಂಡ ಮಾಡಿ ಬ್ರಾಹ್ಮಣರಾಗೋ ಆಸೆ ಇರೋರಿಗೆಲ್ಲ ಸ್ನಾನ ಮಾಡಿ ಬನ್ನಿ ಒಬ್ಬೊಬ್ಬರಿಗೆ ಯಜ್ಞೋಪವೀತ ಹಾಕಿ ಬ್ರಹ್ಮೋಪದೇಶ ಮಾಡಿ ಬ್ರಾಹ್ಮಣರಾಗಿಸುತ್ತೀನಿ ಯಾರು ಯಾರಿಗೆ ಬೇಕು ಕೈ ಎತ್ತಿ ಅಥವಾ ಎದ್ದು ನಿಲ್ಲಿ ಎಂದಳು. ಯಾರು ಸಹ ಕೈ ಎತ್ತಲಿಲ್ಲ ಯಾರೂ ಎದ್ದು ನಿಲ್ಲಲಿಲ್ಲ.

ಒಂದು ನಿಮಿಷದ ಹಿಂದೆ ವಾಲ್ಮೀಕಿ ಬ್ರಾಹ್ಮಣರಾಗಲು ಬಯಸಿದ್ದ ಬೇಡರ ನಾಯಕ ಎದ್ದು ನಿಂತು "ಈ ಯಮ್ಮಂಗೆ ಹುಚ್ಚು ಹಿಡಿದೈತೆ ಕಣ್ರೀ"[೨೦] ಎಂದು ಕೂಗಿ ಹೇಳಿದ ಗರುಡಯ್ಯಂಗಾರ್ಯಾರು ತಮ್ಮ ಗಟ್ಟಿಯಾದ ದನಿಗೂಡಿಸಿದರು. "ಹೆಂಗಸು ಜನಿವಾರ ಹಾಕ್ಕೊಂಡಿರೋದು ಅಂದ್ರೆ ಏನು? ಹುಚ್ಚು ಹಿಡಿದಿರೋದೆ ನಿಜ"[೨೧] ಎಂದರು. ವೆಂಕಟೇಶ ತಕ್ಷಣ ಹೇಳಿದ್ದ "ಹುಚ್ಚು ಹಿಡಿದಿದ್ದ ನಮ್ಮಪ್ಪ ಇದ್ದ ತ್ವಾಟದಲ್ಲೇ ಹಗಲು ರಾತ್ರಿ ಇರ್ತಾಳೆ ಬ್ಯಾಡ ಅಂದ್ರೂ ಕೇಳಿಲ್ಲ ವೆಂಕಟರಮಣಯ್ಯನ ದೆವ್ವ ಬಡಿದೈತೆ ಈ ಹುಡುಗೀನ ಕರೆದುಕೊಂಡು ಹೋಗಿ ಕಳ್ಸಿ"[೨೨] ಸಭೆಯ ಅಧ್ಯಕ್ಷರಾದ ದೊಡ್ಡಗೌಡರು ಹೇಳಿಬಿಟ್ಟರು. ಸತ್ಯಭಾಮಳಿಗೆ ಪ್ರಚಂಡ ಕೋಪ ಬಂತು. ಮಾತನ್ನು ಆಡುವುದಕ್ಕೆ ಬರುತ್ತಿಲ್ಲ. ತಲೆ ಸುತ್ತಿ ಬಂದರೂ ಕೇಳಗೆ ಬಿದ್ದು ಬಿಡುತ್ತೇನೆಂಬ ಅರಿವಾಯಿತು. ಆದರೆ ಜಗುಲಿಯಿಂದ ಕೆಳಗಿಳಿದು ಹೋಗಬೇಕೆನ್ನುವಷ್ಟರಲ್ಲಿಯೇ ಕುಸಿದು ಬಿಟ್ಟಳು. ಜನರೆಲ್ಲರೂ ಸತ್ತೋಯ್ತು, ಸತ್ತೊಯ್ತು ದೆವ್ವ ಬಡ್ಕಂಡು ಎನ್ನುತ್ತ ಎದ್ದು ನಿಂತರು. ತಲೆಗೆ ತಟ್ಟೋಕೆ ನೀರು ತನ್ನಿ ಎಂದು ಹೇಳಿ ಸೇರಿದವರೆಲ್ಲ ದೂರ ಕಳಿಸಿದರು.

ನರಸಿಂಹ ಜೋಯಿಸರು ದೇವಸ್ಥಾನದ ಒಳಗಿನಿಂದ ಒಂದು ಚೊಂಬು ನೀರು ತಂದು ತಲೆಗೆ ತಟ್ಟಿದರು. ಐದು ನಿಮಿಷದಲ್ಲಿ ಅವಳಿಗೆ ಪ್ರಜ್ಞೆ ಬಂತು. "ದೇವರ ತೀರ್ಥ ಹಾಕಿದ ಮೇಲೆ ದೆವ್ವ ಬಿಡ್ತು"[೨೩] ಎನ್ನುತ್ತಾ ಜನ ಆಶ್ಚರ್ಯ ಪಟ್ಟರು. ಸತ್ಯಭಾಮಳಿಗೆ ನಾಚಿಕೆಯಾಯಿತು. ತಕ್ಷಣ ಅಲ್ಲಿಂದೆದ್ದು ಹೊರಟಳು. ಸತ್ಯ ತೋಟದ ಗುಡಿಸಲಿಗೆ ಹೋದ ಸ್ವಲ್ಪ ಹೊತ್ತಿನ ಮೇಲೆ ದೇವಸ್ಥಾನದ ಬಳಿ ಹೊಡೆದಾಟ ಬಡಿದಾಟಗಳಾಗುತ್ತಿರುವುದು ಅವಳಿಗೂ ಸಹ ಗೊತ್ತಾಯಿತು. ಕುಮುದಿನಿ ಚೆಂದಾದ ಹೆಣ್ಣಾದರೂ, ಸಿನಿಮಾ ನಟಿಯಂತೆ ಇದ್ದರೂ ಸಹ ಅವಳು ಇದ್ದಾಗಲೇ ಅವನ ನೆನಪು ಪೂಜಾರಯ್ಯನ ಮಗಳ ಕಡೆಯಲ್ಲಿತ್ತು. ಸತ್ಯಭಾಮಳು ತೋಟದಲ್ಲಿ ಶ್ರಮ ವಹಿಸಿ ಕೆಲಸ ಮಾಡುತ್ತಿದ್ದಾಗ ರಂಗಮ್ಮ ತೀರ್ಥ ಪ್ರಸಾದವನ್ನು ತಂದಿದ್ದೇನೆ ಕೈ ತೊಳೆದುಕೊಂಡು ಬಾ ಎಂದಳು. ಸತ್ಯಭಾಮಳು ಬಂದು ತೀರ್ಥ ಪ್ರಸಾದವನ್ನು ತೆಗೆದುಕೊಂಡಳು. ಬೇಡ ಎಂದರೂ ಕೇಳದೆ ತನ್ನ ಕೊರಳೊಳಗಿನಿಂದ ತೆಗೆದು ಐದಳೆ ಚಿನ್ನದ ಸರವನ್ನು ಸತ್ಯಭಾಮಳ ಕೊರಳಿಗೆ ಹಾಕಿದಳು. ಹಣೆಗೆ ಕುಂಕುಮವಿಟ್ಟು ಅವಳ ಎರಡು ಕೆನ್ನೆಗಳನ್ನೂ ನೀವಿ ಬೆರಳುಗಳನ್ನು ಕೆನ್ನೆಗೆ ಕೊಟ್ಟು ಲಟಲಟನೆ ಲಟಿಕೆ ಮುರಿದು "ಕೆಲಸ ಮಾಡಬೇಡ ನೀನು ಲಕ್ಷ್ಮಿ"[೨೪] ಎಂದು ಹೇಳಿ ಕಣ್ಣನ್ನು ಒರೆಸಿಕೊಂಡು ಹೋದಳು. ಸ್ನಾನವನ್ನು ಮಾಡಿಕೊಂಡು ಹೋಮ ಹವನವನ್ನು ಮಾಡಿದಳು ಮೇಲಗಿರಿಗೌಡರು "ನಂಗೊಂದಿಷ್ಟು ಕೊಡವ್ವ ಪ್ರಸಾದನ"[೨೫]

ಎಂದರು. ಸತ್ಯಭಾಮಳು ಅಗ್ನಿಗೆ ಅಸ್ಪೃಶ್ಯತೆ ಇಲ್ಲ ಎಂದಳು. ಸತ್ಯಭಾಮಳು ತೋಟದ ಗುಡಿಸಲಿನಲ್ಲಿ ಊಟವನ್ನು ಮಾಡಿದರು ಸಹ ವಿವಾಹದ ಪ್ರಸ್ತಾವಕ್ಕೆ ಬಂದಿದ್ದರೂ ಹಲವಾರು ವಿಷಯಗಳನ್ನು ಮಾತನಾಡಿದರು, ಆದರೂ ಸಹ ಒಪ್ಪುವ ಸ್ಥಿತಿಯಲ್ಲಿ ಸತ್ಯಭಾಮಳು ಇರಲಿಲ್ಲ.

ಶ್ರೀನಿವಾಸನಿಗೆ ಪ್ರೀತಿ, ಪ್ರೇಮ, ಮದುವೆ, ಮಕ್ಕಳು ನಿನಗೆ ಬೇಕು ನನಗಿಂತಲೂ ಮೀರಾ ತುಂಬಾ ಲಕ್ಷಣವಾದ ಓದಿರುವ ಹುಡುಗಿಯನ್ನು ಮದುವೆ ಮಾಡಿಕೋ ಎಂದಳು. ಮಳೆಗಾಲ ಪ್ರಾರಂಭವಾಗುವುದರಿಂದ ಅಡುಗೆ ಮತ್ತು ಹವನಕ್ಕೆ ಬೇಕಾದ ಗೊಬ್ಬಳಿಯ ಮರದ ತುಂಡುಗಳನ್ನು ಹಾಕಿಕೊಂಡಳು ಒಂದೊಂದಾಗಿ ಕೊಡಲಿಯಿಂದ ತುಂಡುಗಳಿಗೆ ಒಡೆದಾಗ ಪಕ್ಕಳಿಗೆ ಬಿಡುತ್ತಿತ್ತು. ಆದರೂ ಸಹ ಸತ್ಯಭಾಮಳ ಕೆಲಸವನ್ನು ನೋಡಿ ಧೈರ್ಯ ಮೆಚ್ಚುವಂತಹದು. ಮೋಡವು ಕಪ್ಪಾದರಿಂದ ಮಳೆ ಬೀಳುವ ಸಂಭವವಿರುವುದರಿಂದ ಒಡೆದು ಹಾಕಿದ ಸೌದೆಗಳನ್ನು ಮನೆಗೆ ಎತ್ತಿಹಾಕಿದಳು. ಅಷ್ಟರಲ್ಲಿ ಹನಿಗಳು ಬೀಳುವುದಕ್ಕೆ ಪ್ರಾರಂಭವಾಗಿ ಮಳೆಯು ಬರುತ್ತಿತ್ತು. ಸತ್ಯಭಾಮಳ ಆದರ್ಶವು ಮನಸ್ಸಿಗೆ ತಕ್ಕಂತೆ ನಡೆಯುತ್ತಾಳೆ. ಅಂಜದೆ, ಅಳುಕದೆ, ಹೆದರದೆ ಮಾದಿಗರನ್ನು ತನ್ನ ತೋಟದ ಮನೆಗೆ ಸೇರಿಸುತ್ತಾಳೆ. ಮೀರಾಳ ಕೈಯಿಂದಲೇ ಅಡುಗೆಯನ್ನು ಮಾಡಿಸಿ ಜೊತೆಯಲ್ಲಿ ಊಟವನ್ನು ಮಾಡುತ್ತಾಳೆ. ಹರಿಜನ ಜಾತಿಯವರಿಗೆ ಅಂತ ಪುಸ್ತಕವನ್ನು ಬರೆದುಕೊಡುತ್ತಾಳೆ.



ಮೀರಾಳನ್ನು ಶ್ರೀನಿವಾಸನ ಜೊತೆಯಲ್ಲಿ ಕುಳಿತು ಮಾತನಾಡಿದರೆ ಮತ್ತು ಹೊರಗೆ ಹೋದರೆ ಹಾಸ್ಟೆಲಿನಲ್ಲಿರುವ ಉಳಿದ ಹುಡುಗಿಯರು ಏನು ತಿಳಿದುಕೊಳ್ಳುತ್ತಾರೆ? ನನಗೆ ಬೇರೆ ಕೆಲಸವಿದೆ. ಸಾರಿ ಬರುದಿಲ್ಲವೆಂದರೂ ಸಹ ಬಲವಂತ ಮಾಡಿದರು. ಊರು ಬಾಗಿಲಿಗೆ ಕರೆದುಕೊಂಡು ಹೋಗಿದ್ದರು. ನಮ್ಮ ತಂದೆ ತಾಯಿಯವರು ಜಾತಿಯನ್ನು ವಿರೋಧಿಸಿದರೂ ಸಹ ಹಿಂತೆಗೆಯುವುದಿಲ್ಲ ನನ್ನ ಕೈ ಬಿಡಬೇಡ ಎಂದು ಮೀರಾಳ ಬಲಗೈಯನ್ನು ಹಿಡಿದುಕೊಂಡರು. ಆದರೂ ಸಹ ಮೀರಾಳು ಸಿಟ್ಟಿನಿಂದ ಎದ್ದು ಕೈ ಕೊಡವಿಕೊಂಡು ಬಂದಳು. ಮತ್ತೆ ಅವಳ ಕೈ ಹಿಡಿದು "ನೀನು ಹೀಗೆ ಎದ್ದು ಹೊರಟು ಹೋದರೆ ನಾನು ಉಳಿಯೊಲ್ಲ ನಿನ್ನ ಕೈ ಮುಟ್ಟಿ ನನಗೆ ಒಂದು ಔನ್ಸ ವಿಷ ಕೊಟ್ಟು ಹೋಗು"[೨೬] ಎಂದು ಆಗ್ರಹ ಮಾಡಿದನು.

ಇದಾದ ನಾಲ್ಕು ದಿನಗಳ ಮೇಲೆ ಅಲ್ಲಿಯವರೆಗೆ ನಡೆದ ಎಲ್ಲಾ ಸಂಗತಿಗಳನ್ನು ವಿವರಿಸಿ ಮೀರಾ ಸತ್ಯಭಾಮೆಗೆ ಕಾಗದ ಬರೆದಳು. ಊಟ ತಿಂಡಿ ಬೇಡ ಜೊತೆಗೆ ನನಗೆ ನಿದ್ರೆ ಬರುವುದಿಲ್ಲ. ಓದುವುದನ್ನು ಬಿಟ್ಟು ಬರಬೇಕು ಅಂತ ತೀರ್ಮಾನ ಮಾಡಿದ್ದೇನೆ. ನೀವೆ ನನಗೆ ತಿಳುವಳಿಕೆ ಕೊಡಿ ಎಂದಳು. ಪತ್ರವನ್ನು ಓದಿಕೊಂಡು ಸತ್ಯಭಾಮಗೆ ಈ ವಿಚಾರವನ್ನು ಮೊದಲು ಅವನ ತಲೆಯಲ್ಲಿ ತುಂಬಿದಳು. ತಾನೆಯೆಂಬುದು

ನೆನಪಿಗೆ ಬಂದು ತನ್ನ ತಪ್ಪಿನ ಅರಿವಾಯಿತು. ಶ್ರೀನಿವಾಸ ನನ್ನನ್ನು ಮದುವೆಯಾಗಬೇಕು ಎಂದಾಗಲೂ ಅವರ ತಂದೆ ತಾಯಿಗಳೂ ಬ್ರಾಹ್ಮಣ ಹುಡುಗಿ ಮಾಡ್ಕೋನ್ನಲ್ಲಾ ಎಂದರು. ಈಗಲೂ ಸಹ ಹರಿಜನಳಾದ ಮೀರಾಳನ್ನು ಮದುವೆ ಮಾಡಿಕೋತೀನಿ ಶ್ರೀನಿವಾಸ ಎಂದರು. ಸುಮ್ಮನಿರುವುದಿಲ್ಲ ಎಂದು ಹೇಳಿ ಅವಳ ಜೀವನ ಹಾಳಾಗ ಬಾರದು ಎಂದು ಎಚ್ಚರಿಸಿದಳು. ನಿನ್ನ ಸಂಕಲ್ಪ ಶಕ್ತಿಯನ್ನು ಮೊದಲು ಪರೀಕ್ಷೆ ಮಾಡಿಕೊ ಎಂದಳು. ಸತ್ಯಭಾಮಳು ಶ್ರೀನಿವಾಸನಿಗೆ ಹೇಳಿದಳು. ಮೀರಾಳ ಮದುವೆ ಯಾಗಬೇಕೆಂದು ಮನಸ್ಸಿನಲ್ಲಿದೆ ಎಂದಳು. ಅವನು ಆಕೆಯ ಮಾತುಗಳನ್ನು ಕೇಳಿ ಕೋಪಕ್ಕೆ ಗುರಿಯಾದನು. ಸತ್ಯಭಾಮಳು ತನ್ನ ಮದುವೆಗೆ ಇಷ್ಟವಿಲ್ಲ ಎಂದಳು. ಒಂದು ದಿನ ಶ್ರೀನಿವಾಸ ಅವಳನ್ನು ಭವ್ಯವಾದ ಹೋಟೆಲ್ಲಿಗೆ ಕರೆದುಕೊಂಡು ಹೋಗಿ ಫ್ಯಾಮಿಲಿ ರೂಮಿನಲ್ಲಿ ಕುಳಿತು ತಿಂಡಿ ತಿನ್ನುತ್ತಾ ಮಾತನಾಡುವಾಗ ತನ್ನ ಜೇಬಿನಲ್ಲಿಟ್ಟುಕೊಂಡು ಬಂದಿದ್ದ ಐದೆಳೆ ಚಿನ್ನದ ಸರವನ್ನು ಎರಡು ಕೈಗಳಿಂದಲೂ ಅವಳ ಕೊರಳಿಗೆ ಹಾಕಿದ. ಇದೇನು ಅಂದರೂ ಶ್ರೀನಿವಾಸ ಕೇಳಲಿಲ್ಲ. ಮತ್ತೊಂದು ದಿನ ವಜ್ರದ ಓಲೆಗಳನ್ನು ತಂದುಕೊಟ್ಟು "ಇದನ್ನು ಹಾಕಿದರೆ ನೀನು ಥೇಟ್ ವೈಜಯಂತಿಮಾಲಾ ಥರ ಕಾಣಿಸ್ತೀಯಾ"[೨೭] ಎಂದು ಹೊಗಳಿದ. ಶ್ರೀನಿವಾಸ ಮತ್ತು ಮೀರಾಳು ಕಾರಿನಲ್ಲಿ ನಂದಿ ಬೆಟ್ಟಕ್ಕೆ ಹೋದರು ಜವಾನ್ ಹತ್ತಿರ ಬಂದು ತಮಗೆ ಸಾಯಂಕಾಲದ ವರೆಗೆ ವಿಶ್ರಾಂತಿ ತೆಗೆದುಕೊಳ್ಳಲು ಒಂದು ರೂಮು ಬುಕ್ ಮಾಡಿ ರಿಜಿಸ್ಟರ್‌ನಲ್ಲಿ ಶ್ರೀ ಮತ್ತು ಶ್ರೀಮತಿ ಶ್ರೀನಿವಾಸ ಬಸ್ ಮಾಲೀಕರು ತುಮಕೂರು ಎಂದು ವಿಳಾಸ ಬರೆದ. ರೂಮಿನ ಒಳಗೆ ಹೋದ ಮೇಲೆ ಬಾಗಿಲನ್ನು ಮುಚ್ಚಿ ಬೋಲ್ಟ್ ಹಾಕಿ ಕಿಟಕಿಗಳನ್ನು ಮುಚ್ಚಿದ. ಮೀರಾ ನನಗೆ ಹೆದರಿಕೆ ಆಗುತ್ತೆ ಎಂದು ಹಿಂಜರಿದಾಗ "ಹೆದರಬೇಡ ಪ್ಲೀಸ್ ಮೀರಾ"[೨೮] ಎಂದು ಬೇಡಿಕೊಂಡು ಅವಳ ಭುಜವನ್ನು ಹಿಡಿದು ಮಂಚದ ಮೇಲಕ್ಕೆ ಕರೆದುಕೊಂಡು ಹೋಗಿದ್ದ.

ಶ್ರೀನಿವಾಸನಿಂದ ಮೀರಾಳಿಗೆ ಒಂದು ಕಾಗದ ಬಂತು ಆದರೆ ಅದು ತಲೆ ತಿರುಗುವಂತೆ ಇತ್ತು. ಅಂದರೆ ಅದರಲ್ಲಿ ಮೂರು ವಾಕ್ಯವನ್ನು ಬರೆದಿದ್ದ. "ನನ್ನನ್ನು ಮರೆತು ಬಿಡು, ನಾನು ನಿನ್ನನ್ನು ಮದುವೆ ಆಗುವುದು ಸಾಧ್ಯವಿಲ್ಲ, ಸಾಯುವ ತನಕ ಒಂಟಿಯಾಗಿರುತ್ತೇನೆ"[೨೯] ಎಂದು ಬರೆದಿದ್ದನು. ಅವನು ಬರೆದಿದ್ದರೂ ಸಹ ಮೀರಾಳು ಒಪ್ಪುವ ಸ್ಥಿತಿಯಲ್ಲಿರಲಿಲ್ಲ. ಕೊನೆಗೆ ವಿಪರೀತವಾಗಿ ಅಳು ಬಂತು. ಮಾತನ್ನೇ ಬದಲಾಯಿಸಿದ್ದಾನೆ ಎಂದು ಹೇಳಿದಳು. ತಾನೆ ತುಮಕೂರಿಗೆ ಹೋಗಿ ನೋಡುವ ಸಲುವಾಗಿ ಮೀರಾ ಶ್ರೀನಿವಾಸನ ರೂಮಿಗೆ ಬಂದಾಗ ಅಮಲಿನಲ್ಲಿದ್ದಾನೆಂದು ಮುಖವೇ ಹೇಳುತ್ತಿತ್ತು. ಕಣ್ಣುಗಳು ಜ್ವರ ಬಂದವರಂತೆ ಕೆಂಪಗೆ ಜಿಡ್ಡು ಜಿಡ್ಡಾಗಿ ತುಂಬಿಕೊಂಡಿತ್ತು ತೂರಾಡುತ್ತಾ ಬಂದು ಬಾಗಿಲು ತೆರದಾಗ ಮೀರಾ ಒಳಗೆ ಹೋದಳು. ರೂಮಿನ ತುಂಬಾ ಸಿಗರೇಟು ವಾಸನೆ ತುಂಬಿಕೊಂಡಿತ್ತು. ಹೇಗೋ ಸಹಿಸಿಕೊಂಡು ಮೀರಾ ಒಳಗೆ ಹೋಗಿ ಮಂಚದ ತುದಿಯಲ್ಲಿ ಕುಳಿತಳು. ನೀನಿರೊದೆ ಮಜಾ

ಮಾಡೋಕೆ ಬೇಕಾದಷ್ಟು ಚಿನ್ನ ಮಾಡಿಸಿಕೊಡ್ತೀನಿ ಎಂದು ಅವಳ ಬೆನ್ನಿಗೆ ಕೈ ಹಾಕಿ ಎಳೆದರೂ ಅವನನ್ನು ತಕ್ಷಣ ಹಿಂದಕ್ಕೆ ತಳ್ಳಿ ಮಲಗಿಸಿ ಎದ್ದು ಕಿಟಕಿಯ ಹತ್ತಿರ ಹೋಗಿ ನಿಂತಳು. ಅಂತರಂಗದ ಆಳವನ್ನು ಇರಿದಂತಾಯಿತು. ಮೀರಾಳಲ್ಲಿ ದುಃಖವು ಮುಖದಲ್ಲಿ ಎದ್ದು ಕಾಣುತ್ತಿದ್ದನ್ನು ನೋಡಿ ಸತ್ಯಭಾಮಳಿಗೆ ಗಾಬರಿಯಾಯಿತು. ಶ್ರೀನಿವಾಸ ನಡೆದುಕೊಂಡ ರೀತಿಯನ್ನು ಮೀರಾ ಸಂಕ್ಷಿಪ್ತವಾಗಿ ಹೇಳಿದಳು. ಅವನಿಗೆ ಕುಡಿದು ಬುದ್ಧಿ ಕೆಟ್ಟದ್ದೇಯೋ ಎಂದು ಸಮಾಧಾನ ಮಾಡಿದಳು. ಸತ್ಯಭಾಮಳು ಶ್ರೀನಿವಾಸನಿಗೆ ಇದ್ದಕ್ಕಿದ್ದ ಹಾಗೇಯೇ ಮಾತು ಬದಲಾಯಿಸಿದರೆ ಅವಳ ಗತಿ ಏನು? ಮೀರಾ ಜೊತೆಯಲ್ಲಿ ಇಷ್ಟೆಲ್ಲಾ ಸುತ್ತಾಡಿ ಏಕೆ ತಪ್ಪಿಸಿಕೋತ್ತಿದ್ದಿಯಾ? ಎಂದು ಕೇಳಿದಳು. ಮೀರಾಳು ಸಹ ಇವನಿಗೆ ಪ್ರೀತಿ ಇಲ್ಲಾ, ಕಾಮದ ಮೇಲೆ ಪ್ರೀತಿ ಇದೆ ಎಂದಿದ್ದಳು. ಮಾತುಗಳನ್ನು ಕೇಳಿ ಸತ್ಯ ಬೆರಗಾದಳು. ಬೆಳಿಗ್ಗೆ ಎದ್ದಾಗ ಮೀರಾ ಜನಿವಾರ ಹಾಕಿಕೊಳ್ಳುವ ಹವನ ಮಾಡುವ ಯಜ್ಞ ಪೂಜೆ ಮಾಡುವ ಆಸೆಯನ್ನು ವ್ಯಕ್ತ ಪಡಿಸಿದಳು. ಸ್ನಾನ ಮಾಡಿಕೊಂಡು ಮಡಿ ಸೀರೆಯುಟ್ಟು ಬಂದ ಮೀರಾಳಿಗೆ ಸತ್ಯಭಾಮೆಯು ಯಜ್ಞೋಪವೀತ ಧಾರಣೆ ಮಾಡಿಸಿ ಗಾಯಿತ್ರಿ ಮಂತ್ರವನ್ನು ಹೇಳಿಸಿ ಇವತ್ತಿನಿಂದ ಬ್ರಾಹ್ಮಣಳಾದಳು. ಯಾವ ಮತದವರೂ ಹೀಯಾಳಿಸಿದರೂ ಸಹ ಲೆಕ್ಕಿಸದೇ ಸಂಕಲ್ಪ ಶಕ್ತಿ ಹೊಂದಿರಬೇಕು ಎಂದು ಹೇಳಿದ್ದಳು.

ರಾತ್ರಿ ತಡವಾಗಿ ಮಲಗಿ ನಿದ್ದೆಹೊದ ಸತ್ಯ ಬೆಳಗ್ಗೆ ಎದ್ದು ಮುಖ ತೂಳೆಯುವಷ್ಟರಲ್ಲಿ ಒಬ್ಬ ಕಾನ್ಸ್ಟೇಬಲ್ ಬಂದು ಬೆಟ್ಟಯ್ಯನವರ ಮಗಳು ಕೆರೆಯಲ್ಲಿ ಬಿದ್ದು ಸತ್ತಿದ್ದಾರೆ, ಮಹಜರ್ ನಡೆಯುತ್ತಿದೆ. ಏರಿ ಹತ್ತಿರ ನೀವು ಬರಬೇಕಂತೆ ಎಂದು ತಿಳಿಸಿದರು. ಮೀರಾಳ ತಂದೆ ತಾಯಿಗಳೆಲ್ಲರೂ ದುಃಖವನ್ನು ವ್ಯಕ್ತಪಡಿಸುತ್ತಿದ್ದರು. "ಸ್ವಇಚ್ಛೆಯಿಂದ ಆತ್ಮ ಹತ್ಯೆ ಮಾಡಿಕೊಂಡಿದ್ದೇನೆ ಯಾರದೂ ಯಾವ ರೀತಿಯಲ್ಲೂ ಜವಾಬ್ದಾರಿಯಿಲ್ಲ"[೩೦] ಎಂದು ಬರೆದು ಕೆಳಗೆ ರುಜು ಮಾಡಿ ಹಾಕಿದ ಕಾಗದಕ್ಕೆ ಹಿಂದಿನ ದಿನದ ತಾರೀಖು ಹಾಕಲಾಗಿತ್ತು. ಸತ್ಯಭಾಮಳನ್ನು ಹೇಳಿಕೆ ಕೊಡಿ ಎಂದಾಗ ಅವಳ ವ್ಯಾನಿಟಿ ಬ್ಯಾಗ ನೋಡಿದ್ದೀರಾ? ಎಂದಳು. ಆ ಬ್ಯಾಗಿನಲ್ಲಿ ರಹಸ್ಯ ಸುದ್ದಿಗಳು ಸಿಕ್ಕಿದಾಗ ಯಾರನ್ನು ಸಹ ಏನೂ ಮಾಡಲಿಲ್ಲ. ಪಾರ್ವತಿಯು ಸಹ ಕೋಪ ಮಾಡಿಕೊಂಡು ಕೇಸು ಹಾಕಿ ಬುದ್ಧಿ ಕಲಿಸಬೇಡವೇ? ಎಂದಳು. ಮಾತನ್ನು ಬೆಳೆಸಬೇಡ ಹೇಳಿ ಎಂದಳು. ಸುಧಾರಣೆಗೆ ಪ್ರಯತ್ನ ಪಟ್ಟರೆ ಎರಡು ಜೀವಗಳ ಬಲಿಯಾಯಿತು ಎಂದು ದುಃಖ ಪಟ್ಟಳು. ಸತ್ಯಭಾಮಳಿಗೆ ಮೋಹನದಾಸನನ್ನು ಮದುವೆಯಾಗಬೇಕೆಂಬ ಆಸೆಯಿದ್ದರೂ ಸಹ ಸ್ವಭಾವದಲ್ಲಿ, ದೃಷ್ಟಿಕೋನದಲ್ಲಿ, ಹೊಂದಲಾರದಷ್ಟು ಅಂತರವಿದೆ. ದೇವಸ್ಥಾನದಲ್ಲಿ ಮೋಹನದಾಸ ಕೆಳಗೆ ಬಿದ್ದಾಗ ಗರ್ಭಗುಡಿಯಲ್ಲಿ ದೇವರ ಮುಂದಿಟ್ಟಿದ್ದ ತಾಮ್ರದ ಚೊಂಬಿನಲ್ಲಿ ಮುಕ್ಕಾಲು ಬಾಗ ನೀರಿತ್ತು. ಹಿಡಿದು ತಂದು ಬಲಗೈ ಹಾಕಿಕೊಂಡು ನೀರನ್ನು ತಲೆಗೆ ತಟ್ಟಿ ಮುಖಕ್ಕೆ ಸಿಂಪಡಿಸಿದಳು. ಸೆರಗಿನಿಂದ ಗಾಳಿಯನ್ನು ಬೀಸಿದಳು. ಅಣ್ಣ ವಿಜಯದಶಮಿ ಹಬ್ಬಕ್ಕೆ ಕರೆದರೂ ಸಹ

ತೋಟವನ್ನು ಬಿಟ್ಟು ಊರೋಳಕ್ಕೆ ಹೋಗಲು ಸಿದ್ದಳಿಲ್ಲ. ಹೊಲದಲ್ಲಿ ಕೆಲಸವನ್ನೂ ಮಾಡಿದರೂ ಇದರಲ್ಲಿ ಏನಿದೆ? ಎಂದಳು. ಸಂಶೋಧನೆಯನ್ನಾದರೂ ಮಾಡಬೇಕು ಎಂದಳು.

ಮೋಹನದಾಸನು ಸತ್ಯಭಾಮಳ ತೋಟದ ಮನೆಗೆ ಬಂದು ಇಲ್ಲಿಂದ ಮೊದಲು ಹೊರಟು ಹೋಗಿ ನಿಮಗೆ ಅಪಾಯ ಕಾದಿದೆ ಎಂದನು. ಯಾಕೆ ಅಪಾಯ? ಯಾರಿಂದ? ಎಂದು ಪ್ರಶ್ನೆ ಹಾಕಿದಳು. ಸತ್ಯಭಾಮಳಿಗೆ ಕೊಲೆ ಮಾಡಿಸುವ ಪ್ರಯತ್ನ ನಡೆದಿದೆಯೇ? ಯಾರು ಮಾಡಿಸಬೇಕು ಮಂತ್ರಿಗಳೇನಾದರೂ ಹಂಚಿಕೆ ಹಾಕಿರಬಹುದೆ? ನಂಬಿಕೆ ಬರಲಿಲ್ಲ. ಧೈರ್ಯ ಮಾಡಿಕೊಂಡು ತೊಟದಲ್ಲಿಯೇ ಇದ್ದಳು. ಧೈರ್ಯ ಪರೀಕ್ಷೆ ಮಾಡಿ ಅವನಿಗೇನಾಗಬೇಕು ಎಂದಳು. ಅಪಾಯದ ಧ್ಯಾನದಲ್ಲಿದ್ದರಿಂದ ಥಂ ಥಂ ಶಬ್ದ ಕೇಳಿತು. ನಿಮಿಷ ಕಳೆದಂತೆ ನೀರಿನ ಮೊರೆತ ಹೆಚ್ಚಾಯಿತು. ಎಲ್ಲೆಲ್ಲೂ ಜಲಮಯ ಪ್ರವಾಹವು ಏರಿ ಮನೆಯನ್ನು ಸುತ್ತುವರಿಯುತ್ತದೆ ಎನಿಸಿತು. ಸೆರಗು ಮತ್ತು ನೆರಿಗೆಗಳ ಭಾಗ ಮುಳ್ಳಿನಿಂದ ಹರಿದು ಜೂಲಾದುದು ಬೇಲಿಯಲ್ಲಿಯೇ ಉಳಿಯಿತು. ನೀರಿನಲ್ಲೆ ದಾಪುಗಾಲು ಹಾಕುತ್ತಾ ಬಿದಿರು ಮುಳ್ಳು ಚುಚ್ಚಿಕೊಂಡಿದ್ದ ಅಂಗಾಲು ಮತ್ತು ತರೆದು ರಕ್ತ ಬರುತ್ತಿದ್ದ ಮಂಡಿ ಮೊಣಕಾಲುಗಳು ನೀರಿನಲ್ಲಿ ಉರಿಯುತ್ತಿದ್ದವು.

ಸತ್ಯಭಾಮ ನೀರಿಲ್ಲದ ಜಾಗಕ್ಕೆ ಬಂದಳು. ಅಪಾಯವಿಲ್ಲವೆಂದು ನಿಂತು ಸುಧಾರಿಸಿಕೊಂಡಳು. ಜನಗಳ ಓಡಾಟವು ಅಸ್ಪಷ್ಟವಾಗಿ ಕಾಣುತ್ತದೆ. ಊರಿಗೂ ನೀರಿನ ಪ್ರವಾಹದಿಂದ ಯಾವ ತೊಂದರೆಯಿಲ್ಲ. ನಮ್ಮ ಗತಿ ಏನಾಯ್ತೋ ಎಂದು ವೆಂಕಟೇಶನು ಹುಡುಕುತ್ತಿದ್ದನು. ಊರಿನ ಕೋಟೆಯ ತನಕ ಸುತ್ತಿ ಬರುತ್ತಿದ್ದ ನೀರಿನಲ್ಲಿ ಗಾಡಿ, ಮರಗಳು, ಕೊಂಬೆ ತುಂಡುಗಳು, ಹುಲ್ಲು, ಜೋಳದ ಕಡ್ಡಿ, ಸೋಗೆ, ಸತ್ತದನಗಳು, ಒಂದೆರೆಡು ಮನುಷ್ಯರ ಹೆಣಗಳು ಗುರುತು ಸಿಕ್ಕಿವೆ. ಪೂರ್ಣ ಚಂದ್ರನೂ ಸಮುದ್ರವನ್ನು ಆಕರ್ಷಿಸುತ್ತಾನಂತೆ. ಉಕ್ಕಿ ಹರಿದು ಗದ್ದೆ ತೋಟಗಳನ್ನು ಕಬಳಿಸುವ ನೀರು ಸಮುದ್ರದಂತೆ ಹರಡುತ್ತದೆ. ಮೋಹನದಾಸ ತಪ್ಪಿಸಿಕೊಳ್ಳುವುದರೊಳಗೆ ಏರಿ ಸಿಡಿದು ಅವನ ಸಮೇತ ಕೊಚ್ಚಿಹೋದನು. ಗುಡಿಯು ಶಿಖರ ಸಮೇತ ಕುಸಿದು ಬಿದ್ದಿದೆ. ಕೊರಳಿನಿಂದ ಜನಿವಾರವನ್ನು ಹಿಡಿದುಕೊಂಡು ನಿಂತಳು. ಸತ್ಯ ಅಪ್ಪನ ಮಾತುಗಳಿಂದ ಪ್ರವಾಹ, ಪ್ರಳಯ, ಎಲ್ಲೆಲ್ಲೂ ನೀರು, ಆಲದೆಲೆ, ಹೊಸ ಸಂಸ್ಕಾರ, ನೆನಪಿಗೆ ಬಂದವು ನೀರು ಮೇಲೆ ಬಂದಂತೆ ಎಲ್ಲಾ ಮೇಲೆ ಬನ್ನಿ ಎಂದು ಜನಗಳು ಕರೆಯುತ್ತಿದ್ದಾರೆ. ಕಿತ್ತು ಬಂದ ಜನಿವಾರವನ್ನು ಸುತ್ತಿ ಉಂಡೆ ಮಾಡಿ ನೀರಿನೊಳಕ್ಕೆ ಎಸೆದಳು. ಅವಳ ನಾಲಗೆಗಳು, ತುಟಿಗಳು, ಮಂತ್ರವನ್ನು ಜಪಿಸುತ್ತಿದ್ದೇವು ಆದರೂ ಜನಿವಾರ ಕೇವಲ ಬಾಹ್ಯಲಾಂಛನ ಮಾತ್ರ. ಈ ಬಾಹ್ಯಲಾಂಛನದಿಂದ ಅಂತರಂಗದಲ್ಲಿ ಪರಿವರ್ತನೆಯಾಗಲೀ, ಪರಿಪಕ್ವತೆಯಾಗಲೀ ಸಾಧ್ಯವಿಲ್ಲವೆಂಬ ಅರಿವು ಸತ್ಯಭಾಮಳಿಗೆ ಮನದಟ್ಟಾಗುತ್ತದೆ. ಹಾಗೇಯೇ ಅಂತರಂಗ ಪಕ್ವವಾದಮೇಲೆ ಈ

ಬಾಹ್ಯಲಾಂಛನದ ಅಗತ್ಯವೂ ಇಲ್ಲವೆಂಬ ಅರಿವು ಸಹ ಹೊಳೆಯುತ್ತದೆ. ಇನ್ನವಳು ಯುಗಯುಗಗಳಿಂದ ವ್ಯವಸ್ಥಿತವಾಗಿ ನಡೆದು ಬಂದಿದ್ದು ಐತಿಹಾಸಿಕ, ಧಾರ್ಮಿಕ ಹಾಗೂ ಸಾಮಾಜಿಕ ರೂಢಿಗತ ಆಚರಣೆಯಿಂದ ಮುಕ್ತಳಾದರು.

ಸತ್ಯಭಾಮಳಂತಹ ದಿಟ್ಟ ಹೆಣ್ಣು ಎಲ್ಲ ದ್ವಂದ್ವಗಳನ್ನು ದಾಟಿ ಬಂದರೂ ಸಹ ವೈಯಕ್ತಿಕವಾಗಿ ಅಸುಖಿಯಾಗುತ್ತಾಳೆ. ಈ ಎಲ್ಲಾ ಕಟುಸತ್ಯಗಳನ್ನು ನಿರೂಪಿಸುತ್ತಾ ಈ ಕೃತಿ ಸಾರುವ ಸಂದೇಶ 'ದಾಟು' 'ದಾಟು' ಎಲ್ಲಿಯೂ ನಿಲ್ಲದೇ 'ದಾಟು' ಎಂದು ಸಂದೇಶಿಸುತ್ತಾ ಮುಂದೆ ಶತಮಾನಗಳಿಂದ ಮಾನವನ ಪ್ರಗತಿಗೆ ಸ್ವಸ್ಥ ಸಮಾಜ ರಚನೆಗೆ ಅಡ್ಡವಾಗಿರುವ ದಾಟುಗಳನ್ನು ಸಂಕೇತಿಸುತ್ತದೆ.

**ಕೊನೆ ಟಿಪ್ಪಣಿಗಳು:**

೧) ದಾಟು, ಎಸ್.ಎಲ್. ಭೈರಪ್ಪ: ಪುಟ ಸಂಖ್ಯೆ ೩೭.೧

ಪುಟ ಸಂಖ್ಯೆ ೬೨.೨

ಪುಟ ಸಂಖ್ಯೆ ೭೧.೩

೨) ಭೈರಪ್ಪನವರ ಕಾದಂಬರಿಗಳಲ್ಲಿ ಸ್ತ್ರೀ ಪಾತ್ರಗಳು ಡಾ. ಆರ್.ಎನ್.ದಿಂಡೂರ ಪುಟ ಸಂಖ್ಯೆ ೧೭೯.೪

೩) ದಾಟು ಎಸ್. ಎಲ್. ಭೈರಪ್ಪ ಪುಟ ಸಂಖ್ಯೆ ೧೧೨.೫

ಪುಟ ಸಂಖ್ಯೆ ೧೧೩.೬

೪) ಭೈರಪ್ಪನವರ ಕಾದಂಬರಿಗಳಲ್ಲಿ ಸ್ತ್ರೀ ಪಾತ್ರಗಳು ಡಾ.ಆರ್.ಎನ್. ದಿಂಡೂರ ಪುಟಸಂಖ್ಯೆ ೧೯೬.೭.೮.೯.೧೦

೫) ಯುಗಸಾಕ್ಷಿ ಭೈರಪ್ಪರ ಕೃತಿಗಳ ಅವಲೋಕನ ಎಲ್. ವಿ. ಶಾಂತಕುಮಾರಿ ಪುಟ ಸಂಖ್ಯೆ ೧೯೫.೧೧

೬) ದಾಟು ಎಸ್.ಎಲ್.ಭೈರಪ್ಪ ಪುಟ ಸಂಖ್ಯೆ ೧೬೧.೧೨

ಪುಟ ಸಂಖ್ಯೆ ೧೬೨.೧೩

೭) ಭೈರಪ್ಪನವರ ಕಾದಂಬರಿಗಳಲ್ಲಿ ಸ್ತ್ರೀ ಪಾತ್ರಗಳು ಡಾ.ಆರ್.ಎನ್. ದಿಂಡೂರ ಪುಟ ಸಂಖ್ಯೆ ೧೯೭.೧೪

೮) ಡಾ. ಎಸ್.ಎಲ್. ಭೈರಪ್ಪನವರ ಕಾದಂಬರಿಗಳೊಡನೆ

ಧರ್ಮ,ಕರ್ಮ,ಜಿಜ್ಞಾಸೆ, ಡಾ.ಕೆ.ಎಲ್.ಗೋಪಾಲ ಕೃಷ್ಣಯ್ಯ ಪುಟ ಸಂಖ್ಯೆ ೧೮೦.೧೫.೧೬

ಪುಟ ಸಂಖ್ಯೆ ೧೮೧.೧೭

ಪುಟ ಸಂಖ್ಯೆ ೧೮೫.೧೮

೯) ಭೈರಪ್ಪನವರ ಕಾದಂಬರಿಗಳಲ್ಲಿ ಸ್ತ್ರೀ ಪಾತ್ರಗಳು, ಡಾ.ಆರ್.ಎನ್. ದಿಂಡೂರ ಪುಟ ಸಂಖ್ಯೆ ೧೮೧.೧೯

೧೦) ಡಾ. ಎಸ್.ಎಲ್ ಭೈರಪ್ಪನವರ ಕಾದಂಬರಿಗಳೊಡನೆ

ಧರ್ಮ,ಕರ್ಮ,ಜಿಜ್ಞಾಸೆ, ಡಾ.ಕೆ.ಎಲ್.ಗೋಪಾಲಕೃಷ್ಣಯ್ಯ ಪುಟ ಸಂಖ್ಯೆ ೧೯೦.೨೦.೨೧

ಪುಟ ಸಂಖ್ಯೆ ೧೯೧.೨೨.೨೩

೧೧) ಭೈರಪ್ಪನವರ ಕಾದಂಬರಿಗಳಲ್ಲಿ ಸ್ತ್ರೀ ಪಾತ್ರಗಳು ಡಾ. ಆರ್. ಎನ್. ದಿಂಡೂರ ಪುಟ ಸಂಖ್ಯೆ ೧೭೯.೨೪

೧೨) ದಾಟು ಎಸ್.ಎಲ್. ಭೈರಪ್ಪ ಪುಟ ಸಂಖ್ಯೆ ೩೦೯.೨೫

೧೩) ಡಾ. ಎಸ್.ಎಲ್. ಭೈರಪ್ಪನವರ ಕಾದಂಬರಿಗಳೊಡನೆ

ಧರ್ಮ, ಕರ್ಮ, ಜಿಜ್ಞಾಸೆ, ಡಾ.ಕೆ.ಎಲ್.ಗೋಪಾಲ ಕೃಷ್ಣಯ್ಯ ಪುಟ ಸಂಖ್ಯೆ ೧೯೫.೨೬

ಪುಟ ಸಂಖ್ಯೆ ೧೯೬.೨೭

ಪುಟ ಸಂಖ್ಯೆ ೧೯೭.೨೮

೧೪) ದಾಟು ಎಸ್. ಎಲ್ ಭೈರಪ್ಪ ಪುಟ ಸಂಖ್ಯೆ ೩೭೦.೨೯

೧೫) ಡಾ. ಎಸ್. ಎಲ್ ಭೈರಪ್ಪನವರ ಕಾದಂಬರಿಗಳೊಡನೆ

ಧರ್ಮ, ಕರ್ಮ, ಜಿಜ್ಞಾಸೆ, ಡಾ.ಕೆ.ಎಲ್.ಗೋಪಾಲ ಕೃಷ್ಣಯ್ಯ ಪುಟ ಸಂಖ್ಯೆ ೧೯೯.೩೦

***

## ಅಧ್ಯಾಯ ೪

# ದಾಟು ಕಾದಂಬರಿಯಲ್ಲಿ ರಾಜಕೀಯ ಬದುಕಿನ ಆಲೋಚನೆಗಳು

ದಾಟು ಕಾದಂಬರಿಯಲ್ಲಿ ಬರುವ ಮಂತ್ರಿಗಳಾದ ಮೇಲಗಿರಿಗೌಡರು ಸಮಾಜದ ಅಭಿವೃದ್ಧಿಯ ಬಗ್ಗೆ ಹೆಚ್ಚು ಆಸಕ್ತಿ ಉಳ್ಳವರು. ಸಮಾಜದಲ್ಲಿ ಶಾಂತಿ ಸಹಬಾಳ್ವೆ ಮತ್ತು ಸಮಾನತೆಯನ್ನು ಕಾಪಾಡಿಕೊಂಡು ಹೋಗುವುದರಲ್ಲಿ ಪ್ರಯತ್ನಪಟ್ಟವರಲ್ಲಿ ಒಬ್ಬರು. ಜನರಿಗೆ ಕೆಲಸವನ್ನು ಮಾಡಲು ನಾವು ಯಾವಾಗಲೂ ಸಿದ್ಧವೆಂದು ಭರವಸೆಯನ್ನು ಕೊಡುವುದನ್ನು ಕಾದಂಬರಿಯಲ್ಲಿ ಕಾಣಬಹುದಾಗಿದೆ. ಕೆಲಸವನ್ನು ಕೇಳುವುದಕ್ಕೆ ಮಂತ್ರಿಗಳ ಹತ್ತಿರ ಹೋದರೆ ಅವರು ಬರೀ ಆಶ್ವಾಸನೆಯನ್ನು ಕೊಡುತ್ತಾರೆಯೇ ಹೊರತು ಕೆಲಸಗಳು ಕಾರ್ಯರೂಪಕ್ಕೆ ಬರುವುದಿಲ್ಲ. ಮಂತ್ರಿಗಳು ಜನರುಗಳನ್ನು ಮರಳು ಮಾಡಿಸುವ ವೃತ್ತಿಯನ್ನು ಹೊಂದಿರುತ್ತಾರೆ. ಆದರೆ ಜನರುಗಳಿಗೆ ಅವರು ಕೆಲಸವನ್ನು ಮಾಡಲು ಹಿಂದೆ ಮುಂದೆಯು ನೋಡುವುದನ್ನು ಕಾಣಬಹುದಾಗಿದೆ. ಅವರು ಮಾತ್ರ ಸಚಿವ ಸ್ಥಾನಕ್ಕೆ ಹೋಗಬೇಕೆಂಬ ಆಸೆಯನ್ನು ಮೇಲಗಿರಿಗೌಡರು ಹೊಂದಿರುತ್ತಾರೆ. ಆದ್ದರಿಂದಲೇ ಕೆಂಪಣ್ಣಗೌಡರು ಎಂ.ಎಲ್.ಎ.ಗಳ ಹತ್ತಿರ ಒಳ್ಳೆಯ ಸಂಬಂಧವನ್ನು ಮಾಡುತ್ತಾರೆ. ಇವರು ಎಷ್ಟು ಸಲ ಆಸೆ ಪಟ್ಟರೂ ಸಹ ವಿಫಲವಾಗುವುದನ್ನು ಕಾದಂಬರಿಯಲ್ಲಿ ಕಾಣಬಹುದು.

ಬೆಟ್ಟಯ್ಯನವರು ಹರಿಜನ ವರ್ಗದಿಂದ ಗೆದ್ದುಬಂದು ಎಂ.ಎಲ್.ಎಗಳಾಗಿದ್ದಾರೆ. ಇವರು ಸಾತ್ವಿಕ ಗುಣವನ್ನು ಹೊಂದಿರುವರು. ಮೇಲ್ವರ್ಗದವರ ತಿರಸ್ಕಾರ, ಅವಹೇಳನ, ಶೋಷಣೆ, ಕ್ರೌರ್ಯವನ್ನು ಆನುಭವಿಸಿದ್ದಾರೆ. ಪ್ರತಿಭಟನೆಯನ್ನು ಮಾಡದಿರುವ ಸಾಧು ಮನುಷ್ಯರು ಗಾಂಧೀಜಿಯವರ ತತ್ವಗಳನ್ನು ಅಳವಡಿಸಿಕೊಂಡು ಸುಧಾರಣೆಯನ್ನು ಮಾಡುವ ಸೌಮ್ಯ ಮಾರ್ಗ ಅನುಸರಿಸಿದವರು. ಇವರನ್ನೂ ಸಹ ಕಾದಂಬರಿಯಲ್ಲಿ ಕಾಣಬಹುದಾಗಿದೆ.

ತಿರುಪತಿಯ ತಿರುಮಲನ ಶ್ರೀನಿವಾಸ ದೇವಸ್ಥಾನ ಇರುವುದರಿಂದ ತಿರುಮಲಾಪುರವೆಂಬ ಹೆಸರು ಬಂತು. ಈ ಊರಿನ ಕೋಟೆಯನ್ನು ಕಟ್ಟಿದ ಪಾಳೆಗಾರ ವಂಶದವನು ಮೇಲಗಿರಿಗೌಡ ಮದರಾಸಿನಲ್ಲಿ ಬಿ.ಎಲ್.ಮಾಡಿ ತುಮಕೂರಿನಲ್ಲಿ ವಕೀಲ ವೃತ್ತಿಯನ್ನು ನಡೆಸಿ, ಸ್ವದೇಶಿ ಚಳುವಳಿಯಲ್ಲಿ ಭಾಗವಹಿಸಿ, ಸಾಬರಮತಿ ಆಶ್ರಮದಲ್ಲಿ ಗಾಂಧೀಜಿಯವರೊಂದಿಗೆ ಇದ್ದವರು. ಈಗ ಮೈಸೂರು ಸರಕಾರದಲ್ಲಿ ಉಪ ಮುಖ್ಯಮಂತ್ರಿಗಳಾಗಿದ್ದಾರೆ. ಸ್ಮಾರ್ತರೆಲ್ಲರೂ ಸೇರಿ ಸಪೋರ್ಟ ಮಾಡದಿದ್ದರೆ ಚುಣಾವಣೆಯಲ್ಲಿ ಗೆಲ್ಲುತ್ತಿರಲಿಲ್ಲಾ. ಇವರ ಮನೆಯನ್ನು ಕೋಟೆ ಮನೆಯಂತ ಎಲ್ಲರೂ ಕರೆಯುತ್ತಿದ್ದರು. ಮೇಲು ಕೀಳು ಎಂಬ ಭಾವನೆ ಸೃಷ್ಠಿಯಾಗಿರುವುದರಿಂದ ಭಾರತವು ಅಧೋಗತಿಗಿಳಿಯಿತೆಂದು ಹೇಳುತ್ತಾರೆ. ಪ್ರತಿಯೋಬ್ಬರಿಗೂ ಸಮಾನತೆ ಮುಖ್ಯ ಎನ್ನುವ ವಿಚಾರವನ್ನು ಹೊಂದಿದ್ದವರು. ಕಾಗದವನ್ನು ಓದಿ ವಿಷಯ ತಿಳಿದಾಗ ಮೇಲಗಿರಿಗೌಡರಿಗೆ ಒಂದು ರೀತಿಯ ಸಂತೋಷ ಇನ್ನೊಂದು ರೀತಿಯ ಅಸಮಾಧಾನವಾಯಿತು. ಮೇಲಗಿರಿಗೌಡ ವಿದ್ಯಾರ್ಥಿ ಆಗಿದ್ದಾಗ ಗುರುಗಳು ಗರುಡ ಅನ್ನು ಎಂದರು. ಆದರೆ ಅವನು ಸರಿಯಾಗಿ ಉಚ್ಚರಿಸದೇ ನಾನು ಗಲ್ಡ ಎಂದೇ ಎಷ್ಟು ಆಡಿಕೊಂಡರು ಗೊತ್ತಾ? ಎಂದರು.

ವೆಂಕಟರಮಣಯ್ಯ ಗರುಡ ಎಂದವನು ಪೂಜಾರಿಯಾಗಿಯೇ ಉಳಿದನು. ಗಲ್ಢ ಎಂದವನು ಲಾಯರಾಗಿ, ಮಂತ್ರಿಯಾಗಿ ಹೋದರು. ಆದರೆ ಈಗ ಯಾರೂ ಮೇಲು ಅಂತೀಯಾ? ಎಂದರು. ಮತಗಳನ್ನು ಮಾಡಿರುವದು ಮೇಲ್ವರ್ಗದವರು ಎಂದು ತಿಳುವಳಿಕೆ ಕೊಡಬೇಕು. ಅಸ್ಪೃಶ್ಯತೆಯನ್ನು ಮನೆಯ ಹೆಂಗಸರು, ಮುದುಕರು, ಪಾಲಿಸಿಕೊಳ್ಳಲಿ ಆದರೆ ನನಗೆ ಆ ಭೇದಭಾವವಿಲ್ಲ. ಮೇಲಗಿರಿಗೌಡನ ಮಗನ ಪ್ರೀತಿ ಪ್ರೇಮ ವಿಚಾರವೂ ಗೊತ್ತಿರುತ್ತದೆ. ಎಲ್ಲಾ ಚುಣಾವಣೆಯಲ್ಲಿ ಪ್ರತಿಸ್ಪರ್ಧಿಗಳಿರುವುದರಿಂದ ತಮ್ಮನ್ನು ಎಲ್ಲಿ ಮೂಲೆಗುಂಪು ಮಾಡುತ್ತಾರೆ ಎನ್ನುವ ಭಯಗಳು ಇರುವುದರಿಂದ ಮೊಳೆಯದ ಹಾಗೆ ನೋಡಿಕೊಳ್ಳಬೇಕು. ಪ್ರತಿಸ್ಪರ್ಧಿಗಳು ಬೇರು ಬಿಟ್ಟರೆ ಕೀಳುವುದಕ್ಕೆ ಕಷ್ಟ ಎಂದರು. ಎಲ್ಲಾ ಕಾರ್ಯಗಳು ಬೇಕು ಅಂದರೆ ಮೇಲ್ವರ್ಗದವರು ನನ್ನ ಹತ್ತಿರ ಬಂದು ಕೇಳಬೇಕು ಎನ್ನುವ ಅಹಂಕಾರ ಸ್ವಭಾವದವನು. ಮತಗಳನ್ನು ತಮ್ಮ ಕಡೆಗೆ ಎಳೆಯುವ ಪ್ರಯತ್ನವನ್ನು ಮಾಡಿದರು. ಮಂತ್ರಿಗಳು ಬೋರನಿಂಗಪ್ಪನವರೊಡನೆ ಶಿವಗೆರೆಗೆ ಬಂದರು. ಜನರುಗಳು, ಹುಡುಗರು ತಮ್ಮೂರಿಗೆ ಮಂತ್ರಿಗಳು ಬಂದಿದ್ದಾರೆ ಎನ್ನುವ ಉತ್ಸಾಹದಲ್ಲಿದ್ದರು. ಎಲ್ಲಾ ಜನರುಗಳೆಲ್ಲರು ಲಂಕೇಗೌಡರ ಮನೆಯಲ್ಲಿ ಸೇರಿದರು. ಕುರ್ಚಿ ಇದ್ದರೂ ಸಹ ಮಂತ್ರಿಗಳು ಕೆಳಗೆ ಎಲ್ಲರ ಜೊತೆಯಲ್ಲಿಯೇ ಕುಳಿತರು. ಭಾಷಣ ಮಾಡುತ್ತಾ ಸಮಾಜಕ್ಕೆ ಬೂದುಗುಂಬಳ ಕಾಯಿ ಕಥೆ ಆಗದಿದ್ದರೆ ಸಾಕು. ನಮ್ಮನ್ನು ಆಯ್ಕೆ ಮಾಡಿ ಎನ್ನುವ ಅರ್ಥದಲ್ಲಿ ಹೇಳಿದನು. ರಾಮಾಯಣ ಕಥೆ ವಿವರಿಸುವಾಗ ಸುಮಂತ ಭರತನಿಗೆ ಕಂದಾಯವನ್ನು ವಸೂಲು ಮಾಡು ಎಂದಿದ್ದರು. ರೈತರಿಗೆ ಕಷ್ಟಕೊಡಬಾರದು ಎನ್ನುವ ನಂಬಿಕೆಯನ್ನು ಹೊಂದಿದ್ದ ಆದರೆ

ರಾಮನಿಗೆ ಪಟ್ಟಾಭಿಷೇಕ ಮಾಡಿಸುವುದಕ್ಕೆ ಹಣ ಬೇಕೆಂದಾಗ ಖಜಾನೆ ಖಾಲಿಯಾಗಿದೆ ಕಂದಾಯ ವಸೂಲು ಮಾಡಲಿಲ್ಲ ಎಂದನು. ಮಂತ್ರಿಯಾದ ಸುಮಂತ ನಾನು ಹೇಳಿದ ಹಾಗೇಯೇ ಮಾಡಿ ಎಂದು ಕುತಂತ್ರವನ್ನು ಹೇಳಿಕೊಟ್ಟವನು. ರೈತರನ್ನೆಲ್ಲಾ ಕರೆದು ಹುರಿಸಿಟ್ಟಿದ್ದ ಬೀಜಗಳನ್ನು ಕೊಟ್ಟನು. ಅವು ಎಷ್ಟು ನೀರು ಹಾಕಿದರೂ ಸಹ ಹುಟ್ಟಲಿಲ್ಲ. ಆದರೆ ಶಿರಚ್ಛೇದನದ ಭಯವನ್ನು ಹಾಕಿದರು. ಇಲ್ಲವೇ ಬೂದುಗುಂಬಳಕಾಯಿ ತೂಕದ ಚಿನ್ನವನ್ನು ಎಲ್ಲಿ ತರ್ತಾನೆ? ರೈತರದು ಮುಗ್ಧ ನಂಬಿಕೆಯ ಸ್ವಭಾವದವರು. ಮೋಸ ಮಾಡುವುದು, ಕೇಡು ಮಾಡುವುದು ಇವರಿಗೆ ಗೊತ್ತಿಲ್ಲ ಆದರೂ ಇಲ್ಲಿ ಮಂತ್ರರೈತರಿಗೆ ಅನ್ಯಾಯ, ಮೋಸ ಮಾಡಿ ಹೆಂಡತಿಯರ ಕೊರಳಿನ ತಾಳಿ ಕೀಳುವ ತನಕ ಬಿಡಲಿಲ್ಲ. ನಂಬಿಕೆ ದ್ರೋಹಿ, ವಿಶ್ವಾಸ ಘಾತಕ ಎಂದರು.

ಮೇಲಗಿರಿಗೌಡರು ರೈತ ಸಮಾಜಕ್ಕೆ ತಮ್ಮ ಜೀವನವನ್ನು ತೆಗೆದಿಟ್ಟುರುವುದಾಗಿ ತಿಳಿಸಿದರು. ಸುಳ್ಳನ್ನೇ ದಾಳಗಳನ್ನಾಗಿ ಬಳಸಿದರು. ಯಜಮಾನರಿಗೂ ಕನಸು ಕಾಣಿಸಿಕೊಂಡಿರುವುದರಿಂದ ನಿಜವಾಗುತ್ತದೆ ಎಂದು ನಂಬಿದರು. ಮದುವೆಯ ವಿಚಾರದಲ್ಲಿ ನಿಮಗೆ ಸ್ವಾತಂತ್ರವನ್ನು ಕೊಟ್ಟಿದ್ದೇನೆ ನೀವು ಮಾಡಿಕೊಂಡರೂ ಸರಿ, ಬಿಟ್ಟರೂ ಸರಿ, ನೀನು ಮತ್ತು ಅಮ್ಮನ ನಿರ್ಧಾರ ಕೇಳು ಎಂದರು. ಪ್ರೀತಿಯಿಂದ ಅಮ್ಮನ ಮಾತನ್ನೆ ಕೇಳಲಿಲ್ಲ ಅಂದರೆ ನನ್ನ ಮಾತು ಕೇಳಲ್ಲ ಎಂದರ್ಥ, ಸಾಕಿದ ತಾಯಿಗೆ ಮಕ್ಕಳು ವಿರೋಧವಾಗಿ ನಡೆದುಕೊಳ್ಳಬಾರದು. ತಾಯಿಯ ಮಾತನ್ನು ಕೇಳಬೇಕು ಎಂದರು. ಮಂತ್ರಿಗಳಿಂದ ಮದುವೆಯನ್ನು ಮಾಡಬಾರದೆಂದು ಆಕ್ಷೇಪ ಬಂದಿದೆ ಎಂದು ರಿಜಿಸ್ಟ್ರಾರ್ ಹೇಳಿದನು. ಆದರೆ ಶ್ರೀನಿವಾಸನಿಗೆ ಕೋಪ ಬರುತ್ತದೆಂದು ಮಂತ್ರಿಗಳು ನಿರೀಕ್ಷಿಸಿರಲಿಲ್ಲ. ಅವನ ವರ್ತನೆಯನ್ನು ಕಂಡು ಅಸಹ್ಯ ಎನಿಸಿತ್ತು. ಆದರೆ ಕೋಪ ಮಾಡಿಕೊಂಡವರ ಹತ್ತಿರ ಕೋಪ ಮಾಡಿಕೊಳ್ಳಬಾರದೆಂದು ಗಾಂಧೀಜಿ ಹೇಳಿತ್ತಿದ್ದರು. ನೀವು ಸಂಪಾದಿಸಿರುವ ಆಸ್ತಿಗಳು, ಸಂಪತ್ತು ಬೇಡ ಪೆಟ್ಟಿಗೆ ಅಂಗಡಿಯನ್ನು ಇಟ್ಟಿಕೊಂಡು ಎಲ್ಲಿಯಾದರೂ ಜೀವನ ಮಾಡುತ್ತೇನೆ. ಮೇಲಗಿರಿಗೌಡರು ಅವನ ಜೀವನದ ಭವಿಷ್ಯಕ್ಕೆ ಒಳ್ಳೆಯದು ಮಾಡಿದ್ದೇನೆ ಎಂದರು. ಗಾಂಧೀ ತತ್ವವನ್ನು ಇಟ್ಟುಕೊಂಡು ಸುಳ್ಳನ್ನೇ ಬಂಡವಾಳವನ್ನಾಗಿ ಮಾಡುತ್ತಾನೆ. ರಿಜಿಸ್ಟಾರ್ ಮದುವೆಯನ್ನು ನಾಲ್ಕು ದಿವಸ ನಿಲ್ಲಿಸಿದನು. ಆದರೆ ಮೇಲಗಿರಿಗೌಡರು ತಾಯಿಯನ್ನು ಕೊಂದ ಪಾಪಿ ಎಂದು ಪುನರ್ಜನ್ಮವೆತ್ತಿದ್ದರೂ, ತಾಯಿಯ ಋಣವನ್ನು ತೀರಿಸುವುದಕ್ಕೆ ಆಗುವುದಿಲ್ಲ ಎಂದರು.

ರೈತರೆಲ್ಲ ಬಡತನದಲ್ಲಿದ್ದಾರೆ ಬರಗಾಲವು ಬಂದು ಹೆಣಗಳು ಬೀಳುತ್ತವೆ ಇದಕ್ಕೆ ಉಪಾಯವೇನು ಎಂಬ ಬಗ್ಗೆ ಚರ್ಚೆ ಆಗುತ್ತಿತ್ತು. ಆದರೆ ರೈತರ ಕಷ್ಟ ಸುಖ ಮುಖ್ಯ. ನಿನ್ನ ತಾಯಿಯ ಜವಾಬ್ದಾರಿ ನಿನ್ನದು. ಸತ್ತರು ಸಹ ಕೇಳುವುದಿಲ್ಲ. ಆದರೂ ಹೆತ್ತ ತಾಯಿಯನ್ನು ಕೊಲ್ಲಾಕೆ ಮಗ ಹುಟ್ಟಿರುವುದು

ಎಂದು ಹೊರಟು ಹೋದರು. ಮಕ್ಕಳು ಹಿರಿಯರ ಮರ್ಯಾದೆಯನ್ನು ಕಾಪಾಡಬೇಕು ಎಂದಾಗ ಶ್ರೀನಿವಾಸ ಮರ್ಯಾದೆ ಕಳೆಯುವಂತ ಕೆಲಸ ನಾನು ಮಾಡಿಲ್ಲ ಎಂದನು. ಆದರೆ ರಿಜಿಸ್ಟ್ರಾರ್ ಮದುವೆ ಮಾಡುವುದಕ್ಕೆ ಹೊರಟಿದ್ದೆ. ಮನೆಮಠ ಇದ್ದವರು ಮಾಡಾ ಕೆಲ್ಸನಾ? ಎಂದರು. ನೀನು ಹುಟ್ಟಿರುವುದು ರಾಜ್ಯ ಆಳಿದ ಮನೆಯಲ್ಲಿ? ಕ್ಷತ್ರಿಯ ರಕ್ತ ನಿಂದು ಪೂಜಾರಯ್ಯನ ಮಗಳನ್ನ ವಿವಾಹಕ್ಕೆ ಹೊರಟೀದೀಯಲ್ಲ ಧರ್ಮ ಇದು? ಎಂದರು. ದುರಹಂಕಾರ, ಪಾಳೆಗಾರಿಕೆ, ಪಟೇಲಿಕೆ ನಡೆಯುವುದಿಲ್ಲ. ಅವರ ಗುಣ ಯೋಗ್ಯತೆಗೆ ಬೆಲೆ ಗೌರವ ಕೊಡಬೇಕು ಎಂದನು. ಅಜ್ಜನಿಗೆ ಕೋಪ ಬಂದಾಗ ನೀನು ಒಕ್ಕಲಿಗನಿಗೆ ಹುಟ್ಟಿದ್ದು ಸುಳ್ಳೇ? ಎಂದರು. ವೆಂಕಟರಣಯ್ಯನವರು ಬೆಂಗಳೂರಿನಿಂದ ಬಂದಾಗಿನಿಂದ ಸರಿಯಾಗಿ ಊಟ ಮತ್ತು ನೀರು ಕುಡಿದಿಲ್ಲ. ಊರೋಳಕೆ ಮುಖವನ್ನು ತೋರಿಸಿಲ್ಲ. ಜನರುಗಳು ಸ್ಮಾತರು ಬ್ಯಾಳೆ ಕಾಳಾ ಅಂತ ಮಾತಾಡುತ್ತಿದ್ದಾರೆ. ತಿರುಮಲೆಗೌಡನಿಂದ ಶ್ರೀನಿವಾಸನಾದ. ಮನೆಯವರು ಮಾತ್ರ ಮಲ್ಲೇಶ ಎಂದು ಕರೆಯುತ್ತಿದ್ದರು. ಮಂತ್ರಿಯಾಗಿದ್ದ ಮೇಲಗಿರಿಗೌಡರು ತಾಲೂಕಿನಲ್ಲಿ ಪ್ರಸಿದ್ಧ ದೇವಸ್ಥಾನದ ಮುಕ್ತ ಪ್ರವೇಶಕ್ಕೆ ಹರಿಜನರಿಗೆ ಮಾಡಿಸುವುದಕ್ಕೆ ಒಪ್ಪಿದ್ದಾರೆ. ನಮ್ಮ ಗೌಡಿಕೆ ಮರ್ವಾದಿ ಹಾಳು ಮಾಡ್ದೆ ನನ್ಮಗನೆ ಎಂದು ದೊಡ್ಡ ಯಜಮಾನರು ಮಗನನ್ನು ದಾಕ್ಷಿಣ್ಯವಿಲ್ಲದೆ ಖಂಡಿಸಿದರು. ತಂದೆಗೆ ಉತ್ತರವನ್ನು ಕೊಡುವುದಕ್ಕೆ ಆಗಲಿಲ್ಲ. ಯಾವನೋ ಜಾತಿ ಬಿಟ್ಟ ಅಂತ ನೀನ್ ಬಿಡ್ತಿ ಏನ್ಲಾ? ಎಂದು ಕೋಪಗೊಂಡರು. ಈ ವಿಷಯದಲ್ಲಿ ತಂದೆ ಮಗನಿಗೆ ಜಗಳವಾಗುತ್ತೆ, ಪಾಳೆಗಾರರ ಮನೆ ಒಡೆದು ಹೋಗುತ್ತೆ, ಮೇಲಗಿರಿಗೌಡರು ತಮ್ಮ ಪಾಲನ್ನು ತೆಗೆದುಕೊಂಡು ಹೋಗುತ್ತಾರೆ ಎಂದು ಊರಿನ ಜನಗಳು ಕನಸ್ಸನ್ನು ಕಂಡರೂ ಅದು ಅಸಾಧ್ಯವಾಗಿಯೇ ಕಂಡಿತು.

ತಿರುಮಲಾಪುರ ದೇವಸ್ಥಾನದ ಮುಕ್ತ ಪ್ರವೇಶಕ್ಕೆ ಸಕಲ ಸಿದ್ದತೆಗಳನ್ನು ಮಾಡಿಕೊಂಡು, ಹರಿಜನರ ಪ್ರತಿನಿಧಿ ಬೆಟ್ಟಯ್ಯನವರ ಮೂಲಕ ಸುತ್ತಮುತ್ತಲಿನ ಹಳ್ಳಿಯ ಜನರು ಮತ್ತು ಊರಿನ ಜನರನ್ನು ಕರೆದುಕೊಂಡು ಬಂದರು. ಮೇಲಗಿರಿಗೌಡರು ಪತ್ರಿಕಾ ಪ್ರತಿನಿಧಿಗಳನ್ನು ಕರೆದುಕೊಂಡು ಬಂದ ಹರಿಜನರನೆಲ್ಲ ಗುಡಿಯ ಮುಂಭಾಗದಲ್ಲಿ ನಿಲ್ಲಿಸಿ ಮಧ್ಯೆ ಬೆಟ್ಟಯ್ಯನ ಜೊತೆ ತಾವು ನಿಂತು ಫೋಟೊ ತೆಗೆಸಿಕೊಂಡರು. ಗುಡಿಯ ಯಜಮಾನರಾಗಿ ಮೇಲಗಿರಿಗೌಡರು ಹರಿಜನ ಮುಖ್ಯರಾದ ಬೆಟ್ಟಯ್ಯನವರೊಡನೆ ಪ್ರವೇಶ ಮಾಡಿ. ಸ್ವಾಮಿ ದರ್ಶನ ಪಡೆದರು. ಅನಂತರ ತೀರ್ಥ ಪ್ರಸಾದವನ್ನು ತೆಗೆದುಕೊಂಡರು. ಎಲ್ಲಾ ಜನರು ಪ್ರವೇಶವನ್ನು ಮಾಡಿ ದೇವರ ದರ್ಶನ ಪಡೆದು ತೀರ್ಥಪ್ರಸಾದವನ್ನು ತೆಗೆದುಕೊಂಡರು. ಪ್ರವೇಶಕ್ಕೆ ತಿರಸ್ಕರಿಸಿದರೆ ಪೂಜಾರಿಕೆಯನ್ನು ಕಿತ್ತು ಹಾಕುತ್ತಾರೆ. ಸಮಾಜದ ಬದಲಾವಣೆ ಏನೂ ಮಾಡುವುದು? ಅವರ ಮಾತಿಗೆ ಪ್ರತಿಹೇಳುವಂತಿಲ್ಲ. ಪೂಜೆಯನ್ನು ಬಿಟ್ಟು ಬಿಡುತ್ತಿದ್ದರು. ದೇವರ ಜಮೀನು ಹೋಗುವುದರಿಂದ ಬಿಡುವುದಕ್ಕೆ ಸಾಧ್ಯವಿಲ್ಲ. ಮೇಲಗಿರಿಗೌಡರನ್ನು

ತಿರಸ್ಕರಿಸಿದರೂ ಒಳ ವಿಷಯವು ಬೇರೆ ಇದೆ ಎಂದರು. ಮುಂದಿನ ಚುನವಣೆಯಲ್ಲಿ ಹರಿಜನರ ಹತ್ತಿರ ಮತವನ್ನು ಹಾಕಿಸಿಕೊಳ್ಳುವುದಕ್ಕೆ ಕೆಲಸ ಮಾಡುತ್ತಾನೆ ಎಂದರು. ಅದರಲ್ಲಿಯೂ ಮಾತಂಗಿಯು ಸಹ ತನ್ನ ಎರಡು ವರ್ಷದ ಮಗನನ್ನು ತನ್ನ ಜೊತೆಯಲ್ಲಿಯೆ ಎತ್ತಿಕೊಂಡು ಹತ್ತಿರ ಬಂದಳು.

ಮಾತಂಗಿಯು ದೇವರನ್ನು ನೋಡಿದಳೋ ಇಲ್ಲವೋ ಗಮನಿಸದಂತೆ ತೀರ್ಥವನ್ನು ತೆಗೆದುಕೊಂಡು ಮುಂದೆ ಹೆಜ್ಜೆ ಹಾಕಿದಳು. ಅವಳ ಹಿಂದಿದ್ದ ಹೆಂಗಸು ಮಗುವಿಗೆ ತೀರ್ಥವನ್ನು ತೆಗೆದು ತುಟಿಗೆ ತಗುಲಿಸಿ ಅರ್ಧವನ್ನು ಕುಡಿಸಿ ಉಳಿದುದನ್ನು ತಾನು ಕುಡಿದಳು. ಎಲ್ಲರನ್ನು ಸಹ ಮುಕ್ತ ಪ್ರವೇಶ ಪಡೆದ ಮೇಲೆ ತಮ್ಮ ಬದುಕುಗಳಿಗೆ ಹೊರಟುಹೋದರು. ಪ್ರವೇಶವಾದ ನಂತರವೂ ದೇವಸ್ಥಾನ ತೊಳೆದು ಪುಣ್ಯಾವಾಚನವನ್ನು ಮಾಡಿ ಮಾವಿನ ಸೊಪ್ಪಿನಿಂದ ಶುದ್ಧ ಜಲವನ್ನು ಚಿಮುಕಿಸಿದರು. ಎಲ್ಲರೂ ಊರಿಗೆ ಬಂದರು. ಪತ್ರಿಕೆಗಳಲ್ಲಿ ಸಮಾಜವು ಆಧುನಿಕತೆಗಳ ಹತ್ತಿರ ಜನರು ಮರಳುತ್ತಿದ್ದಾರೆ ಎಂಬ ವಿಷಯವು ಪ್ರಕಟವಾಯಿತು. ಮೇಲುಗಿರಿಗೌಡರು ಒಳ್ಳೆಯ ಬಟ್ಟೆಗಳನ್ನು ಹಾಕಿಕೊಂಡು ಒಳ್ಳೆಯವರಂತೆ ಕಾಣುತ್ತಿದ್ದರು. ಮದುವೆಯ ವಿಚಾರದಲ್ಲಿಯೂ ಸಹ ತಮ್ಮ ಪದ್ಧತಿ ಇದ್ದಂಗೆ ಮಾಡೋಣ ಬಳಗಧಾರೆಯಾಗಲಿ ಎಂದರು. ನಾವೆಷ್ಟಾದ್ರೂ ಮಣ್ಣಿನ ಮಕ್ಕಳು, ರೈತರು ಕೈ ನೀಡಿ ಕೊಡ್ತಿವೇ ಹೊರತು ತಗೊಳಲ್ಲ ಎಂದರು. ಶ್ರೀನಿವಾಸ ಕುಮುದಿನಿ ಮದುವೆಯನ್ನು ಬಹಳ ವಿಜೃಂಭಣೆಯಿಂದ ನೆರವೇರಿಸಿದರು. ಹಾರುವವರ ಹೆಂಗಸರು ತಮ್ಮ ಹೊಲದಲ್ಲಿ ಕೂಲಿ ಮಾಡುವ ಹಾಗೆ ಮಾಡುತ್ತೇನೆ ಎಂದರು. ಮೇಲಗಿರಿಗೌಡರು ಪ್ರತಿಕಾರ ಭಾವದಿಂದ ಕೂಡಿದೆ. ಆದರೆ ಈ ಮಂತ್ರಿಗಳ ಮನೆಯಲ್ಲಿ ಯಾವ ಹೆಂಗಸರೂ ಹೊರಗೆ ದುಡಿದಿದ್ದಾರೆ? ಅವರು ಹೇಳಿ ಕೇಳಿ ಪಾಳೆಗಾರರ ಮನೆಯವರು. ರಾಜ್ಯ ಆಳಿದ ಮನೆಯ ಹೆಂಗಸರು ಹೊಲದಲ್ಲಿ ಮಣ್ಣು ಮುಟ್ಟುವುದೇ? ಅವನ ಅಜ್ಜ ಹೇಳುತ್ತಾರೆ. ಎಂದು ಶ್ರೀನಿವಾಸ ಒಂದೊಂದು ಸಲ ಹೇಳುತ್ತಿದ್ದನು.

ಮಗನ ಮದುವೆಗೆ ಮುನ್ನ ಜವಳಿ ಅಂಗಡಿಯಲ್ಲಿ ವೆಂಕಟರಮಣಯ್ಯನವರ ಮಗಳನ್ನು ನೋಡಿದಾಗ ಎರಡು ಮೂರು ದಿನ ಮಂತ್ರಿಯವರಿಗೆ ಮನಸ್ಸು ಕಸಿವಿಸಿಯಾಗಿತ್ತು. ಈ ಹುಡುಗಿ ಇಲ್ಲಿ ಯಾಕಿತ್ತು? ಕಾಲೇಜಿನ್ಯಾಗೆ ಶಿಕ್ಷಕಿಯಾದವಳು ಜವಳಿ ಅಂಗಡಿಯಲ್ಲಿ ಏಕೆ ಚಾಕರಿ ಮಾಡುತ್ತಿದೆ? ಎಂದು ಕೊಂಡರು. ಬೆಟ್ಟಯ್ಯನವರು ಸಿಕ್ಕಿದಾಗ ಎಲ್ಲಾ ವಿಚಾರವನ್ನೂ ಹೇಳಿದರು. ಮಂತ್ರಿಗಳು ಗಂಭೀರವಾಗಿ ಯೋಚನೆ ಮಾಡುತ್ತಾ, ನೋಡಿದ್ರಾ ಈ ಜಾತಿ ಯೊಗ್ತೀಯ? ನಾವೇ ಮೇಲು ಅಂತ ಎಷ್ಟಿದೆ ಅವರ ಅಹಂಕಾರ? ಇಂತಹ ಕಾರಣಕ್ಕೆ ಹಿಂಗೆ ಮಾಡಿದ್ರು ಅಂತ ಹುಡುಗಿಗೆ ಹೇಳಿ ಸರ್ಕಾರಕ್ಕೆ ಕಂಪ್ಲೇಟು ಕೊಡಿ. ಆ ಕಾಲೇಜಿಗೆ ಕೊಡುತ್ತಿರುವ ಗ್ರಾಂಟ್‌ನ್ನು ನಿಲ್ಲಿಸಿ ಮತ್ತೆ ಏನೋ ಜ್ಞಾಪಿಸಿಕೊಂಡು ಕೇಳಿದರು. ಆ ಕೆಲಸ ಹೋಯ್ತು ಎಂದು ಕಂಡವರ ಅಂಗಡಿಯಲ್ಲಿ ಕೂಲಿ ಮಾಡುವುದಕ್ಕೆ ಅವಳ ಅಪ್ಪನಿಗೇನು ಬಡತನ

ಬಂದಿತ್ತಾ? ಎಂದರು. ಸತ್ಯಳೇ ಊರಿಗೆ ಹೋಗಿಲ್ಲ ನನಗೆ ಅಪಮಾನವಾಗಿದೆ ಎಂದು ಬರುವುದಿಲ್ಲ. ಬರುತ್ತಿದ್ದರೂ ವೆಂಕಟರಮಣಯ್ಯ ತಿರುಗಿ ನೋಡುತ್ತಿರಲಿಲ್ಲ. ಆ ಜಾತೀಯ ಗುಣ ನಿಮಗೆ ಗೊತ್ತಿಲ್ಲ. ಅದನ್ನು ಕಂಡೇ ನಾನು ಈ ಮದುವೆಗೆ ಬೇಡ? ನೀವು ಆಶ್ರಮದಲ್ಲಿದ್ದವರು ನಾನು ಇದ್ದೆನು. ಮಾಹಾತ್ಮರು ನಾವೆಲ್ಲ ಒಂದಾಗ ಬೇಕು ಎನ್ನುತ್ತಿದ್ದರು. ನಾವು ಹಂಗಂತೀವಿ, ಆದರೆ ಮೇಲಿನವರು ಒಪ್ಪುವರೇನ್ರಿ? ಅವರಿಂದಲೇ ಸಮಾಜ ಒಡೆದು ಚೂರು ಚೂರಾಗಿರುವುದು ಎಂದರು. ಹತ್ತು ನಿಮಿಷದ ನಂತರ ಯೋಚಿಸಿ ಹೇಳಿದರು. ಮೇಲ್ವರ್ಗದವರು ಸಣ್ಣ ಬುದ್ಧಿಯನ್ನು ಮಾಡಿದರೆ ಆಶ್ರಮದಲ್ಲಿದ್ದವರು ನಾವು ಮಾಡಬಾರದು.

ಸತ್ಯಭಾಮಳಿಗೆ ಹೇಳಿ ಸರ್ಕಾರಿ ಕಾಲೇಜಿನಾಗೆ ಕೆಲಸವು ಖಾಲಿ ಇದ್ದರೆ ಹಾಕಲಿ. ಇಲ್ಲದೆ ಇದ್ದರೆ ಇನ್ಯಾವುದಾದರೂ ಖಾಸಗಿ ಕಾಲೇಜಿನಗಾದರೂ ಸರಿ ಕೆಲಸ ಕೊಡಿಸುತ್ತೇನೆ. ಬಡ ಮುಂಡೇದು ಶೆಟ್ಟಿ ಜವಳಿ ಅಂಗಡಿಯಲ್ಲಿ ಕೂಲಿ ಮಾಡುತ್ತೆ, ಎಲ್ಲಾದರೂ ಬೇರೆ ಕೆಲಸವಿದ್ದರೆ ನನಗೆ ಹೇಳಿ ನಾನು ಕೊಡಿಸುತ್ತೇನೆ ಅಂದರು. ನೀವೂ ಹೇಗೆ ಕೊಡಿಸುತ್ತೀರಾ? ಮೇಲಗಿರಿಗೌಡರಿಗೆ ಹೇಳಿ ಅಲ್ಲವೆ? ನನಗೆ ಯಾವ ಕೆಲಸವೂ ಬೇಡ, ಹೀಗೆ ಚೆನ್ನಾಗಿದ್ದೇನೆ ಎಂದರು, ಹೀಗೆ ಒಂದೊಂದು ಘಟನೆಗಳು ಬಂದು ಮರೆತು ಹೊಗುತ್ತೇವೆ. ಸಂಪುಟ ಮಟ್ಟದ ಸಚಿವರಾಗುವುದು ಹೇಗೆ? ಒಂದು ವರ್ಷದಲ್ಲಿ ಪುನಃ ಚುನಾವಣೆ ನಡೆದು, ಈಗ ಸಂಪುಟ ಸಚಿವರಾಗಿದ್ದರೆ ಮುಂದಿನ ಮಂತ್ರಮಂಡಲದಲ್ಲಿ ಅವಕಾಶ ಸಿಗುತ್ತದೆ. ಇಲ್ಲದಿದ್ದರೆ ಸಿಗುವುದಿಲ್ಲ. ಸಂಪುಟ ಮಟ್ಟದಲ್ಲಿದ್ದರೆ ಒಂದಲ್ಲೊಂದು ದಿನ ಮುಖ್ಯಮಂತ್ರಿಗೆ ಸ್ಪರ್ಧಿಸಬಹುದು. ಆದರೂ ಹನ್ನೆರಡು ಜನರು ಬೆಂಬಲಿಗರಿದ್ದೂ ಕಷ್ಟವಾಗುತ್ತಿದೆ. ಇನ್ನೂ ಮೂರು ನಾಲ್ಕು ಜನರನ್ನು ಸಂಪಾದಿಸಬೇಕು ಆದರೆ ಹೇಗೆ? ಒಬ್ಬ ಹೊಸಬನ್ನ ಸಂಪಾದಿಸಬೇಕೆಂದರೂ, ಮತ್ತೊಬ್ಬ ನಾಯಕನಿಂದ ತೆಗೆದುಕೊಳ್ಳಬೇಕು. ಇಲ್ಲವಾದರೆ ವಿರೋಧ ಹುಟ್ಟುತ್ತದೆ. ಎರಡು ಮೂರು ಗಂಡು ಮಕ್ಕಳಿದ್ದರೆ ಅವರನ್ನು ಚೆನ್ನಾಗಿ ಓದಿಸಿದ್ದರೆ, ಒಳ್ಳೆಯ ಸಂಬಂಧವನ್ನು ಹುಡುಕುತ್ತಿದ್ದೆ. ಒಂದು ಮದುವೆಗೆ ನಾಲ್ಕು ಎಂ.ಎಲ್.ಎಗಳ ಪ್ರೋತ್ಸಾಹ ಸಿಕ್ಕಿದರೆ ಮೂರಕ್ಕೆ ಹನ್ನೆರಡು ಆಗುತ್ತದೆ. ಪ್ರಾರಂಭದಲ್ಲಿ ಅಷ್ಟಿದ್ದರೆ ಅದನ್ನೇ ಬೆಳೆಸಿಕೊಂಡು ಮುಖ್ಯಮಂತ್ರಿಯಾಗುವುದಕ್ಕೆ ಆಗಲ್ಲವೇ? ಎಂಬ ಕನಸನ್ನು ಕಾಣುವುದು. ಆದರೆ ತಕ್ಷಣ ವಾಸ್ತವತೆಯ ಅರಿವಾಗಿ ಇಲ್ಲದ್ದನ್ನು ನೆನಪಿಸಿಕೊಳ್ಳಬಾರದು. ಇರುವುದರಲ್ಲಿ ಏನು ಮಾಡುವುದೆಂದು ಯೋಚಿಸುವುದು.

ಅಕ್ಬರ್, ರಜಪೂತರ ಮನೆ ಹುಡುಗೀರ ಮದುವೆ ಮಾಡಿಕೊಂಡು ಜನಕ್ಕೆ ತುಂಬಾ ಹೇಳಿ ಚಕ್ರಾದಿಪತ್ಯ ಬೆಳೆಸಿದರು. ಶ್ರೀನಿವಾಸ ಮಂಡ್ಯದಲ್ಲಿರುವ ತನ್ನ ಹೆಂಡತಿಯನ್ನು ಹೇಗೆ ಸಮಾಧಾನ ಮಾಡಿದೆ? ಎಂದು ಕೇಳಿದರು. ಅದಕ್ಕೆ ಮೇಲಗಿರಿಗೌಡರು ಇದು ಬರೀ ಗಂಡ ಹೆಂಡಿರ ಮುನಿಸಿನ

ಪ್ರಶ್ನೆಯಲ್ಲ, ಇಬ್ಬರು ರಾಜಕೀಯ ಮುಖಂಡರ ದೊಡ್ಡ ಸಂಸಾರಗಳ ಎರಡು ಜಿಲ್ಲೆಗಳ ರೈತಭಾಂದವರ ಬಾಂಧವ್ಯದ ಪ್ರಶ್ನೆಯಾಗಿದ್ದರಿಂದ, ತಾವು ತಿಳಿದಿದ್ದ ವಿವರಗಳನ್ನೆಲ್ಲ ತಿಳುವಳಿಕೆ ಹೇಳಿ ಅಗತ್ಯವೆಂದು ಯೋಚಿಸಿದರು. ಮೇಲಿಗಿರಿಗೌಡರು ಕೇಳಿದಾಗ ಶ್ರೀನಿವಾಸ ಮಾತನಾಡಲಿಲ್ಲ. ಆಗ ಅವರು ಅತ್ತೆ ಮಾವಂದಿರೊಡನೆ ಗೌರವದಿಂದ ನಡೆಯುತ್ತಿದ್ದ ಆ ಹುಡುಗಿ ಈಗ ಏಕೆ ಹೀಗಾಯ್ತು? ತನ್ನ ಮದುವೆಗೆ ಮುಂಚೆ ಇನ್ನೊಬ್ಬ ಹುಡುಗೀನ ಮಾಡ್ಕಬೇಕು ಎನ್ನುತ್ತಿದ್ದ. ಕುಮುದಿನಿಯು ಇದ್ಯಾವ ದೊಡ್ಡ ವಿಷಯ ಹೀಗೆ ತಲೆಗೆ ಹಚ್ಚಿಕೊಂಡಿದ್ದಾಳೆಂದು ತಮ್ಮನ್ನು ತಾವೇ ಕೇಳಿಕೊಂಡರು.

ಕುಮುದಿನಿಯ ಮುನಿಸು ಅತಿಯಾಗಿದೆ. ಸೆಟಕೂ ಜೋರಾಗಿದೆ. ವಯಸ್ಸಿಗೆ ಬಂದ ಮಗನನ್ನೆ ಎದುರು ಹಾಕಿಕೊಳ್ಳಬಾರದು. ಸೊಸೆಗೆ ಬುದ್ದಿಯನ್ನು ಹೇಳಬೇಕು ಎಂದು ಯೋಚಿಸಿ ಹೆಂಡತಿಯನ್ನು ಕರೆದುಕೊಂಡು ಮಂಡ್ಯಕ್ಕೆ ಹೋದರು. ಬೀಗರು ಸೊಸೆಯನ್ನು ಎದುರಿಗೆ ಕೂರಿಸಿಕೊಂಡು ಮಗನ ಎಲ್ಲಾ ವಿಚಾರಗಳನ್ನು ಹೇಳಿದರು. ಮೇಲಗಿರಿಗೌಡರು ಕುಮುದಿನಿಗೆ ನಿನ್ನ ಲಕ್ಷಣ ಎಲ್ಲಿ ಬರಬೇಕು? ನಿನ್ನ ದೇವತೆ ಎಂದು ಪೂಜೆಯನ್ನು ಮಾಡುವಾಗ ಏಕೆ ಕೋಪಿಸಿಕೊಂಡಿದ್ದಿಯಮ್ಮ? ಎಂದು ಕೇಳಿದರು. ಅದಕ್ಕೆ ಕುಮುದಿನಿಯು ಪ್ರೀತಿ ಎನ್ನುವುದು ಬಣ್ಣ ಜಾತಿಗಳನ್ನು ನೋಡುವುದಿಲ್ಲ ಎಂದಳು. ಮಂತ್ರಿಗಳು ಪ್ರಶ್ನೆಯಿಂದ ವಿಸ್ಮಿತರಾದರು. ನನ್ನ ಮೇಲೆ ಸ್ವಲ್ಪವೂ ಮನಸ್ಸಿಲ್ಲ. ಹೆರಿಗೆಯಲ್ಲಿ ಸತ್ತರೆ ಅವಳನ್ನೇ ಮಾಡಿಕೊಳ್ಳುತ್ತಾರೆ. ಆದ್ದರಿಂದಲೇ ಸುಖವಾಗಿ ಮದುವೆ ಮಾಡಿಕೊಳ್ಳಲಿ. ನಾನು ಕಂಟಕವಾಗುವುದಿಲ್ಲ. ಕೆಟ್ಟಮಾತುಗಳನ್ನು ಆಡಬಾರದೆಂದು ಕೆಂಪಣ್ಣನವರು ಕೋಪಗೊಂಡರು. ಅದಕ್ಕೆ ಮೇಲಗಿರಿಗೌಡರು ಈಗಿನ ಕಾಲದ ಹುಡುಗರು ಜಾತಿ, ಧರ್ಮ, ದೇವರು ಮಾಡಿದ್ದೇ ಸುಳ್ಳೆ? ಎಂದು ಬೀಗರು ಹೇಳಿದರು.

ಮಂತ್ರಿಗಳಾದ ಮೇಲಗಿರಿಗೌಡರು ದೊಡ್ಡ ಯೋಚನೆ ಮಾಡಿದರು. ಮಗಳು ತೀರಿದಕೂಡಲೇ ನಮ್ಮಿಬ್ಬರ ಬಾಂಧವ್ಯವು ಒಡೆಯಿತು. ನನ್ನ ಮಗನೇ ಹಾರುವನ ಮಾಗಳಾದ ಸತ್ಯಭಾಮಳನ್ನು ಮದುವೆಯಾದರೆ ರೈತ ಸಮಾಜದಲ್ಲಿ ನನ್ನ ಸ್ಥಾನವೇನು? ಮುಖಂಡರೆಲ್ಲ ಏನಂತಾರೆ? ಎಂಬ ಪ್ರಶ್ನೆಗಳು ತಲೆ ತಿನ್ನುತ್ತಿದ್ದವು. ಮುದುವೆಯಲ್ಲಿ ಕೊಟ್ಟಂತಹ ಶೇವರ್ಲೆ ಕಾರನ್ನು ಅವರಿಗೆ ಕೊಟ್ಟುಬಿಡಿ ಎಂದು ಶ್ರೀನಿವಾಸ ಹೇಳಿದನು. ಮಂತ್ರಿಗಳು ಬೇಡ ಎಂದರು. ಜನಗಣತಿಯ ಜೊತೆಯಲ್ಲಿಯೇ ಮತದಾರರ ಪಟ್ಟಿಗಳು ಸಿದ್ದವಾಗುತ್ತಿದೆ. ಆರು ತಿಂಗಳಿನಲ್ಲಿಯೇ ಚುನಾವಣೆ ಇರುವುದರಿಂದ ಮಂತ್ರಿಗಳು ಸುತ್ತಮುತ್ತಲಿನ ಹಳ್ಳಿಗಳಿಗೆ ಭೇಟಿಯನ್ನು ಮಾಡುತ್ತಿದ್ದಾರೆ. ಈ ಸಲ ಸಂಪುಟ ಸಚಿವರಾಗುವುದು ಸಾಧ್ಯವಿಲ್ಲ. ಎಂ.ಎಲ್.ಎ. ಬೆಂಬಲಿಗರೊಂದಿಗೆ ಮಂತ್ರಪದವಿಯು ನಿರ್ಧಾರವಾಗುತ್ತದೆ. ಇದೇ ಸಂದರ್ಭದಲ್ಲಿಯೂ ಒಂದು ಶುಭ ಸೂಚನೆ ಬಂತು. ಅದಕ್ಕೆ ಮೇಲಗಿರಿಗೌಡರು ಒಪ್ಪಿಗೆಯನ್ನು ಸೂಚಿಸುತ್ತಾ, ಅದಕ್ಕಿಂತ ಹೆಚ್ಚು ಇನ್ನೇನು ಬೇಕು? ಎಂದರು. ಹೆಂಡತಿಯಾದ ರಂಗಮ್ಮನು ತನ್ನ ಮಗನ

ಎಲ್ಲ ವಿಚಾರಗಳನ್ನು ಹೇಳಿದಳು. ಮಂತ್ರಿಗಳು ಕೇಳಿದಾಗ ಅವರಿಗೆ ಆತಂಕವಾಯಿತು. ಮಗನನ್ನು ಸಮಾಧಾನ ಮಾಡುತ್ತ ಪಾಳೇಗಾರರ ವಂಶ ಬೆಳಿಬೇಕು ಎಂದು ಮಗನ ಮಾತನ್ನು ನಿಲ್ಲಿಸಿದರು. ಮಗನಿಂದ ಪ್ರತಿಕ್ರಿಯೆ ಬರದಿದ್ದರೂ ಏನು ಹೇಳುವದು ನಾನು? ಎಂದರು.

ಶ್ರೀನಿವಾಸನು ಸಹ ವಂಶ ಬೆಳೆಯದಿದ್ದರೆ ಏನಾಯ್ತದೆ? ಈ ಮಾತನ್ನು ಕೇಳಿದ ಕೂಡಲೇ ಎಡವಿಬಿದ್ದಂತಾಯಿತು. ನಿನ್ನ ಮನಸ್ಸಿನಲ್ಲಿ ಏನಿದೆ ಬಾಯಿಬಿಟ್ಟು ಹೇಳೋ ಎಂದು ಆತುರದಿಂದ ಕೇಳಿದರು. ಆಗ ಅವನು ಇಷ್ಟಪಟ್ಟು ಹುಡುಗಿಯನ್ನು ತಂದು ಮಾಡಿದರೆ ಮಾಡಿ, ಜಾತಿಯನ್ನು ಎಣಿಸಬಾರದು. ಇಲ್ದೆ ಇದ್ರೆ ಬೇಡ ಎಂದನು. ಶ್ರೀನಿವಾಸನ ಮಾತು ಅನಿರೀಕ್ಷಿತವಾಯಿತು. ವಂಶ ಬೆಳಿಬೇಕೆನ್ನುವ ದರ್ದಿದ್ದೋರು ಬೇಕಾದರೆ ಮಾತನಾಡಿ. ನಂಗೇನು ತೆವಲಿಲ್ಲ ಎಂದು ಹೇಳಿ ಹೊರಟು ಹೋದನು. ಮಂತ್ರಿಗಳ ಎದೆಯ ಮೇಲೆ ಕಲ್ಲು ಚಪ್ಪಡಿಯನ್ನು ಎಳೆದಂತಾಯಿತು.

ಮಂತ್ರಿಗಳ ಮನಸ್ಸಿನಲ್ಲಿ ಕೋಪ ಬಂದರೂ ಸಹ ತಾಳ್ಮೆಯನ್ನು ತಂದು ಕೊಂಡರು. ಬಸ್ಸಿನ ಹತ್ತಿರ ಬಂದು ನಿಗವಹಿಸಬೇಕು ಕಳ್ಳತನ ಹಿಡಿಯಿರಿ ಎಂದು ಹೇಳಿ ಚಲನನ್ನು ಕಂಡಕ್ಟರ ಕೈಗೆ ಕೊಟ್ಟರು. ಮಗನ ಮೇಲೆ ಕೋಪಮಾಡಿಕೊಂಡಿದ್ದರು. ಕೆಂಪಣ್ಣನವರ ಮಗಳಿದ್ದಾಗಲೇ ಅವಳನ್ನು ಬಿಟ್ಟು ಹಾರುವಯ್ಯನ ಮಗಳನ್ನು ಧ್ಯಾನಿಸಿಕೊಳ್ಳಬೇಕಾದರೆ ಇನ್ನೆಂಥವಳು ಬಂದರೂ ಆಗುವುದಿಲ್ಲ. ಹಂಗಾದರೆ ಹಾರುವಯ್ಯನ ಮಗಳೇ ಗತಿಯೇ? ಎಂದರು. ಮತ್ತೆ ಏನಾದರೂ ಮಾಡಿ ಇವನನ್ನು ಮದುವೆ ಮಾಡಿಕೊಳ್ಳಲು ಒಪ್ಪಿಸುವುದಕ್ಕೆ ಆಗಲ್ಲವೇ? ಆದರೂ ಪ್ರಯತ್ನವನ್ನು ಮಾಡಬೇಕು ಎಂದುಕೊಂಡರು. ಆದರೆ ನಮ್ಮ ಮುಂದಿನ ಗತಿ ಏನು? ಸುತ್ತಲಿರುವ ರೈತ ಸಮಾಜವು ಇದನ್ನು ಒಪ್ಪುತ್ತದೆಯೇ? ಅವರನ್ನೆಲ್ಲ ಒಪ್ಪಿಸದೇ ಮದುವೆ ಮಾಡಿದರೆ ನಾಳೆ ಚುನಾವಣೆಯಲ್ಲಿ ಪಲ್ಟಿ ಹೊಡೆಸಿದರೆ? ಎಂತಹಾ ತ್ಯಾಗ ಮಾಡಬೇಕೆ! ಎಂತಹಾ ನುಕ್ಸಾನು ಎನಿಸಿತು ಮತ್ತು ಹೆದರಿಕೆಯಾಯಿತು. ರೈತರು ಈ ಹುಡುಗಿಯ ವಿಷಯದಲ್ಲಿ ಕಷ್ಟವೇ ಎನಿಸಿತು. ನಿಭಾಯಿಸದೆ ಇದ್ರೆ ಪಾಳೆಗಾರರ ರಕ್ತದಲ್ಲಿ ಹುಟ್ಟಿದ್ಯಾಕೆ? ಮಂತ್ರಿಯಾಗಿದ್ಯಾಕೆ? ಎಂದು ಆತ್ಮವಿಶ್ವಾಸವನ್ನು ಮೇಲಗಿರಿಗೌಡರು ತಾಳಿದರು.

ತುಮಕೂರಿನಲ್ಲಿ ನಡೆದುದನ್ನು ವಿವರವಾಗಿ ರಂಗಮ್ಮನಿಗೆ ತಿಳಿಸಿದರು. ತಿರುಪತಿಲಿ ಒಳ್ಳೆಯ ಶಾಸ್ತ್ರದವರು, ಜ್ಯೋತಿಷ್ಯರು ಇದ್ದಾರಂತೆ ಕೇಳಬೇಕು ಎಂದರು. ವೆಂಕಟೇಶನಿಗೆ ಕೊಡಬಾರದೆಂದು ಇದ್ದರೂ ಸಹ ಒಂದು ಮೋಟಾರು ಲೈನು ಕೊಡಿಸಬೇಕು ಅಥವಾ ನಮ್ಮದೆ ಒಂದು ಲೈನನ್ನು ಬಿಟ್ಟುಕೊಡಬೇಕು. ನಮ್ಮ ಬೀಗನೇ ಆದ್ದರಿಂದ ಬದುಕ್ಕಳ್ಳಿ ಎಂದು ಪರಿಹಾರವನ್ನು ಆಲೋಚಿಸಿದರು. ಮಂತ್ರಮೇಲಗಿರಿಗೌಡರು ತೋಟದ ಮನೆಯಲ್ಲಿರುವ ಸತ್ಯಭಾಮಳ ಹತ್ತಿರಕ್ಕೆ ಬಂದರು. ಹೋಮ

ಹವನವನ್ನು ಮಾಡುತ್ತಿದ್ದುದು ಮುಗಿದಾಗ ಮೇಲೆ "ನಂಗೊಂದಿಷ್ಟು ಕೊಡವ್ವ ಪ್ರಸಾದನ"[7] ಎಂದರು. ನೀವೆ ತೆಗೆದುಕೊಳ್ಳಿ, ಅಗ್ನಿಗೆ ಅಸ್ಪೃಶ್ಯತೆ ಇಲ್ಲ ಎಂದಳು. ಅದಕ್ಕೆ ಮೇಲಗಿರಿಗೌಡರು ಒಪ್ಪಿಕೊಂಡು ಒಳ್ಳೆಯ ಮಾತು ಹೇಳ್ದೆಯಮ್ಮ! ಬರೆದಿಡಬೇಕು. ದೇಶದ ನಾಯಕರು ಇದನ್ನು ಅರ್ಥಮಾಡಿಕೊಳ್ಳಬೇಕು ಎಂದು ಬಲಗೈ ನೀಡಿ ಭಸ್ಮವನ್ನು ತೆಗೆದು ಹಣೆಗೆ ಇಟ್ಟುಕೊಂಡರು. ಸತ್ಯಭಾಮಳು ಇಲ್ಲೆ ಊಟ ಮಾಡಬಹುದು ಅಲ್ವ? ಎಂದಾಗ ಮನೆಯಲ್ಲಿ ಕಾಯುತ್ತಿರುತ್ತಾರೆ. ಆದರೂ ಸೊಸೆ ಕೈನ ಊಟವನ್ನು ಇವತ್ತೆ ಮಾಡುವ ಭಾಗ್ಯ ಬಂದರೆ ಏಕೆ ಬೇಡ ಅನ್ಲಿ? ಎಂದರು.

ಮೇಲಗಿರಿಗೌಡರು ಸಹ ಹೆಣ್ಣು ಮಕ್ಕಳು ಚೆನ್ನಾಗಿ ಅಡಿಗೆಯ ಕೆಲಸವನ್ನು ಕಲಿತಿರಬೇಕು ಸಮಯ ಬಂದರೆ ಯಾವ ಕೆಲಸವೂ ಬರುವುದಿಲ್ಲ ಎನ್ನಬಾರದು. ಸ್ವಾವಲಂಬನೆ ಅಂದರೆ ಏನು? ದೇಶಕ್ಕೆ ನಿನ್ನಂಥ ವಿದ್ಯಾವಂತೆಯರ, ಬುದ್ಧಿವಂತೆಯರ ಜ್ಞಾನವು ವಿಶಾಲವಾದ ಕ್ಷೇತ್ರದಲ್ಲಿ ಉಪಯೋಗವಾಗಿ ಜನಕ್ಕೆ ಸಹಾಯವಾಗಬೇಕು. ತೀರ ಅರ್ಜೆಂಟ್ ದಿನವನ್ನು ಬಿಟ್ಟರೆ ಉಳಿದಂತೆ ಅಡಿಗೆ ಎಂದು ಕುಳಿತುಕೊಳ್ಳಬಾರದು ಅಲ್ವಾ? ಎಂದರು. ಸತ್ಯಭಾಮಳು ಉತ್ತರವನ್ನು ಕೊಡಲಿಲ್ಲ. ಮಂತ್ರಿಗಳು ಹೇಳುತ್ತಾ ಗ್ರಾಮದಲ್ಲಿ ಪಂಚಾಯಿತಿ ಆದ ದಿನ ಭಾಷಣವನ್ನು ಮಾಡಿದ್ದು ಸರಿ ಎಂದರು. ಅಜ್ಞಾನದ ಕಾಲವು ಮುಗಿದು ಎಲ್ಲರಿಗೂ ಜ್ಞಾನವಾಗಬೇಕು. ವೇದ ಜ್ಞಾನ ಉಂಟಾಗಬೇಕು. ಬೆಂಗಳೂರಿನಲ್ಲಿ ಮಹಿಳಾ ಸಮಾಜದ ಉದ್ಘಾಟನೆ ಮಾಡುತ್ತಾ ಸ್ತ್ರೀಯರಲ್ಲಿ ವಿದ್ಯಾಭ್ಯಾಸ ಮೂಡಿಸಬೇಕು. ಅಲ್ಲಿಯ ತನಕ ದೇಶವು ಅಭಿವೃದ್ಧಿ ಹೊಂದುವುದಿಲ್ಲ ಎಂದು ಹೇಳಿದರು. ಸತ್ಯಭಾಮಳು ನೀರು ತುಂಬಿ, ತಂಬಿಗೆ ಮತ್ತು ಲೋಟಗಳನ್ನು ಪಕ್ಕದಲ್ಲಿಟ್ಟಾಗ ನಾನೊಬ್ಬ ಹೇಗೆ ಊಟವನ್ನು ಮಾಡಲಿ? ಎಂದರು. ನೀವು ಮಾಡಿ ಆದ ಮೇಲೆ ಮಾಡ್ತೀನಿ ಎಂದಳು. ಆಗ ಮಂತ್ರಿಗಳು ವಿದ್ಯಾವಂತ ಹೆಣ್ಣುಮಕ್ಕಳಿಗೆ ಶೋಭಿಸುವ ಮಾತು. ನಮ್ಮ ಹಳ್ಳಿ ಕಡೆ ಹೆಣ್ಣು ಮಕ್ಕಳಿಗೆ ಗೊತ್ತೇ ಹೊರತು, ಪಟ್ಟಣದವುಗಳಿಗೆ ಎಲ್ಲಿ ಬರಬೇಕು. ನನಗೊಂದು ಚಮಚವನ್ನು ಕೊಟ್ಟರೆ ಸಾಕು ಎಂದಾಗ ಮುದ್ದೆಯನ್ನು ಹೇಗೆ ಮುರೀತೀರಿ? ಸತ್ಯಭಾಮಳು ಕೇಳಿದಳು. ರಾಗಿ ಮುದ್ದೆಯನ್ನು ಮಾಡಿದ್ದಿಯೋ? ನನಗೆ ಪರಮ ಪ್ರೀತಿ ಆದ ಬಿಟ್ಟು ಪಟ್ಟಣದ ಜನಗಳು ಕೆಟ್ಟಿದ್ದಾರೆ. ಎಂದು ಅವರು ಕೈತೊಳೆದುಕೊಂಡು ಬರಲು ಹೊರಗೆ ಹೋದರು. ಆದರೆ ಸ್ವಲ್ಪ ಊಟ ಮಾಡಿದರು. ಚಾಲಕ ಮನೆಯಲ್ಲಿ ಊಟ ಮಾಡುತ್ತಾನೆ ಎಂದು ಹೇಳಿದರು. ಅವರು ಸತ್ಯಭಾಮಳ ಹತ್ತಿರ ಬಂದಿದ್ದು ಸಹ ಮದುವೆಯ ಪ್ರಸ್ತಾಪ ಮಾಡಿದರು. ಸತ್ಯಭಾಮಳು ಸಹ ನಿಮ್ಮ ಹೆಂಡತಿ ಬೆಳಿಗ್ಗೆ ಬಂದಾಗ ಮರೆತು ಹೋದರು. ಈ ಬಂಗಾರದ ಸರವನ್ನು ಅವರಿಗೆ ಕೊಡಿ ಎಂದು ಕೊಟ್ಟಳು. ಆಗ ಅವರು ಅವಳಿಗೆ ತಿಳುವಳಿಕೆ ಇಲ್ಲ ಹಿಂದಿನ ಕಾಲದವಳು. ಶ್ರೀನಿವಾಸನನ್ನ ಕಳಿಸುತ್ತೇನೆ ಬುದ್ಧಿಯನ್ನು ಹೇಳು ಎಂದರು.

ಮಂತ್ರಿಗಳು ಪ್ರೀತಿ ಎನ್ನುವುದು ಗೋಂದು ಇದ್ದಹಾಗೆ ಅವರವರೇ ಸಮಾಧಾನವಾಗಬೇಕು. ಚುನಾವಣೆಯಲ್ಲಿ ಸಂಪುಟ ಸಚಿವ ಅಥವಾ ಚೀಫ್‌ನನ್ನಾಗಿ ಮಾಡುತ್ತಾರೋ ಎನ್ನುವ ಆಕಾಂಕ್ಷೆಯನ್ನು ಹೊಂದಿದ್ದರು. ತನ್ನ ಮಗನ ಸಂತೋಷಕ್ಕಾಗಿ ಎಷ್ಟು ತ್ಯಾಗ ಮಾಡ್ತಿದ್ದೇನೆ! ಎಂಬ ಉನ್ನತ ಭಾವವೂ ಒಂದೊಂದು ಸಲ ಬರುತ್ತಿತ್ತು. ಆದರೆ ಶ್ರೀನಿವಾಸನ ಕಾಗದದಲ್ಲಿ ಮೀರಾಳ ಮದುವೆಯ ವಿಚಾರವನ್ನು ನೋಡಿ ಕಿಡಿ ಕಿಡಿಯಾದರು. ಪಾಳೇಗಾರರ ವಂಶದವರಾಗಿ ಜನನಾಯಕರಾಗಿ ತಾವು ಮಾದಿಗನ ಮಗಳನ್ನು ತರುವ ವಿಷಯವು ಮೈ ಮೇಲೆ ಮುಳ್ಳುಗಳನ್ನು ಎಬ್ಬಿಸಿ ಸಂಬಂಧದವರು ಸುಮ್ಮನಿರ್ತಾರಾ? ತಮ್ಮ ಮತಗಳನ್ನು ಬೇರೆಯವರು ಪಡೆದುಕೊಳ್ಳುತ್ತಾರೆ. ದಬಾಯಿಸಿ ಎಳೆದರೆ ನಮ್ಮ ಸೆರಗೇ ಹರಿಯುತ್ತದೆ. ಉಪಾಯವಾಗಿ ಬಿಡಿಸಿಕೊಳ್ಳಬೇಕು ಎಂದರು. ಮಂತ್ರಿಗಳು ಬೆಟ್ಟಯ್ಯನವರನ್ನು ಕರೆದು ತಮ್ಮ ಮಗಳ ವಿಚಾರವನ್ನು ಪ್ರಸ್ತಾಪ ಮಾಡಿದರು. ನಾನು ಮೀರಾಳನ್ನೇ ಮದುವೆ ಮಾಡಿಕೊಳ್ಳುವುದು ಖಚಿತ ಮಾಡಿದ್ದೇನೆಂದು ತಂದೆಯವರಿಗೆ ಹೇಳಿದನು. ಸಂತೋಷವಿದ್ದರೆ ಶಾಸ್ತ್ರವನ್ನು ಮಾಡಿಸಿ ಇಲ್ಲದಿದ್ದರೆ ಬೇಡ ಎಂದನು. ಮಂತ್ರಿಗಳು ಏನಾದರೂ ಮಾಡಿ ಮದುವೆಯನ್ನು ತಪ್ಪಿಸುವುದಕ್ಕೆ ವೆಂಕಟೇಶನ ಸಹಾಯಕ್ಕೆ ಬಂದಿದ್ದರು. ವೆಂಕಟೇಶನಿಗೆ ಅರ್ಜಿಯನ್ನು ಹಾಕು ಕಿಮ್ಮತ್ತಿನಲ್ಲಿ ಭೂಮಿಯನ್ನು ಮಾಡಿಸಿಕೊಡ್ತೀನಿ ಎಂದು ಭರವಸೆ ಕೊಟ್ಟರು. ಇವನು ಸಹಾಯವನ್ನು ತಪ್ಪದೆ ಮಾಡುತ್ತೇನೆಂದು ಒಪ್ಪಿಕೊಂಡನು.

ವೆಂಕಟೇಶನು ತನ್ನ ತಂಗಿಯಾದ ಸತ್ಯಭಾಮಳ ಮತ್ತು ಮೋಹನದಾಸನ ಎಲ್ಲಾ ವಿಚಾರವನ್ನು ಶ್ರೀನಿವಾಸನಿಗೆ ಹೇಳಿದನು. ಮೀರಳೇ ಬರೆದಿಟ್ಟಿದ್ದ ಕಾಗದ ಮತ್ತು ಸಾವಿನ ಸುದ್ದಿ ತಿಳಿದ ತಕ್ಷಣ ಮಂತ್ರಿಗಳು ಧಾವಿಸಿ ಬಂದಿದ್ದರಿಂದ ಪೋಲೀಸರು ಕೇಸು ಏನೂ ಮಾಡಲಿಲ್ಲ. ಮಂತ್ರಿಗಳು ಸತ್ಯಭಾಮಳನ್ನು ಕರೆದು ನಿಮ್ಮ ಜೊತೆಯಲ್ಲಿ ಮಾತನಾಡಬೇಕು. ಬೆಂಗಳೂರಿಗೆ ಹೋಗೋಣ ಎಂದಾಗ ಬರಲ್ಲ ಎಂದಳು. ಇಲ್ಲದಿದ್ರೆ ಒಂದಿಷ್ಟು ಮಾತಾಡಣ ಎಂದರು. ಅವರ ಒತ್ತಾಯದಿಂದ ಹೊರಟಳು. ಸ್ವಲ್ಪ ದೂರ ಹೋಗಿ ಮಂತ್ರಿಗಳು ವಿಚಾರವನ್ನು ಸತ್ಯಭಾಮಳಿಗೆ ಹೇಳಿದ್ದಾಗ ಇಷ್ಟವಿಲ್ಲದೆ ಹೋರಟು ಬಂದಳು. ಗಲಾಟೆ ಆಗುತ್ತಿದ್ದ ಸಂದರ್ಭದಲ್ಲಿ ಮಂತ್ರಿಗಳು ಬರುತ್ತಿದ್ದಾರೆ ಯಾರ ಮೇಲೆ ಕೈ ಮಾಡಕೂಡದು. ಶಾಂತಿಯಿಂದ ಇರಬೇಕೆಂದು ಸಬ್ ಇನ್ಸಪೆಕ್ಟರ್ ಆದೇಶವಿತ್ತರು. ಗಾಬರಿಯಾಗಿದ್ದ ಜನರೆಲ್ಲರೂ ಸಮಾಧಾನವಾದರು. ದೊಡ್ಡ ಯಜಮಾನರು ತನ್ನ ಮಗನೇ ಬಂದರೂ ಮತ್ತೇ ಯಾರೇ ಬಂದರೂ ದೇವಾಲಯದ ಪ್ರವೇಶಕ್ಕೆ ಹರಿಜನರನ್ನು ಬಿಡುವುದಿಲ್ಲ ಎಂದರು.

ದೊಡ್ಡ ತಿರುಮಲೇಗೌಡರು ಗುಡಿಯ ಬಾಗಿಲ ಕಡೆಗೆ ನೋಡುತ್ತಾ ನಿಂತರು. ಮಂತ್ರಿಗಳು ಮತ್ತು ರಂಗಮ್ಮ ಗುಡಿಯ ದಿಬ್ಬದಲ್ಲಿ ಅಪಾರ ಜನವಿರುವುದನ್ನು ಕಂಡು ಸಂಕೋಚಗೊಂಡರು. ಶ್ರೀನಿವಾಸನಿಗೆ ಹುಚ್ಚು ಒಡಿದಿದ್ದರಿಂದ ಇಳಿಬೇಡ ಎಂದರೂ ಕೇಳದೆ ಕೆಳಗಿಳಿದು "ಯಾವನೋ ಬೋಳಿ ಮಗ ನನ್ನ

ಮಗ ಶಿಖಂಡಿ ಅಂದೋನು?"[೨] ಎಂದು ಅರಚಿಕೊಂಡು ಮೇಲೆ ನುಗ್ಗಿದನು. ಜನರೆಲ್ಲ ಸ್ಥಬ್ಧರಾದರು. ಇವರು ಹತಾಶರಾದವರಂತೆ ಇಳಿದು ಹಿಡಿದುಕೊಳ್ಳಲು ಅವನನ್ನು ಅನುಸರಿಸಿದರು. ದೊಡ್ಡ ಯಜಮಾನರ ಮುಖವು ಸಪ್ಪೆಗಟ್ಟಿತು. ಹತ್ತಿರ ಬಂದ ದೊಡ್ಡ ಗೌಡರಿಗೆ ಮಂತ್ರಿಗಳು ಹೇಳಿದರು. ಇವನಿಗೆ ಹುಚ್ಚು ಹಿಡಿದಿದ್ದರಿಂದ ಸತ್ಯಭಾಮಳು ಸಮಾಧಾನ ಮಾಡಬಹುದು ಎಂದು ಕರೆದುಕೊಂಡು ಬಂದೇವು. ಕೋಟೆ ಬಾಗಿಲಿಗೆ ಬಂದಾಗ ನಾನು ಗುಡಿ ನೋಡಬೇಕು ಎಂದು ಗಲಾಟೆ ಮಾಡಿದ. ಆಸ್ಪತ್ರೆಗೆ ಸೇರಿಸಿದ ನಂತರವೂ ಮಾನಸಿಕವಾಗಿ ಅಸ್ವಸ್ಥನಾಗಿದ್ದಾನೆ ತಾಳ್ಮೆಯಿಂದ ನೋಡಿಕೊಳ್ಳಬೇಕು ಎಂದು ವೈದ್ಯರು. ಹೇಳಿದರು. ಆದರೂ ಸಹ ಅವನ ಕಿರುಚಾಟವು ಜೋರಾಗಿತ್ತು ಕಡಿಮೆ ಆಗುತ್ತಿರಲಿಲ್ಲ ಎಂದರು.

**ಕೊನೆ ಟಿಪ್ಪಣಿಗಳು**

೧) ದಾಟು. ಎಸ್.ಎಲ್.ಭೈರಪ್ಪ ಪುಟ ಸಂಖ್ಯೆ ೩೭೯.೧

ಪುಟ ಸಂಖ್ಯೆ ೪೦೧.೨

***

ಅಧ್ಯಾಯ ೫

# ದಾಟು ಕಾದಂಬರಿಯಲ್ಲಿ ಗಂಡು ಹೆಣ್ಣಿನ ಸಂಬಂಧಗಳು

ವೆಂಕಟರಮಣಯ್ಯನವರು ಧರ್ಮದಲ್ಲಿ ಅತ್ಯಂತ ನಂಬಿಕೆವುಳ್ಳವರು, ಇವರ ಮಕ್ಕಳಾದ ವೆಂಕಟೇಶ ಮತ್ತು ಸತ್ಯಭಾಮ ಪರಸ್ಪರ ವಿರುದ್ಧ ವ್ಯಕ್ತಿತ್ವವುಳ್ಳವರು. ಸತ್ಯಭಾಮಳು ಶ್ರೀನಿವಾಸನನ್ನು ಮದುವೆಯಾಗಲು ಒಪ್ಪಿರುತ್ತಾಳೆ. ಆದರೆ ಶ್ರೀನಿವಾಸ ತಂದೆ ತಾಯಿಗಳ ಮಾತುಗಳಿಗೆ ಒಪ್ಪಿ ಒಲ್ಲದ ಮನಸ್ಸಿನಿಂದ ಕುಮುದಿನಿಯನ್ನು ಮದುವೆಯಾಗುತ್ತಾನೆ. ಕುಮುದಿನಿಯು ಗರ್ಭವತಿಯಾದವಳನ್ನು ನೋಡಿ ವೆಂಕಟರಮಣಯ್ಯ ಶಾಪವನ್ನು ಹಾಕುತ್ತಾನೆ. ಆ ಶಾಪವು ಅವಳಿಗೆ ತಗಲುವುದನ್ನು ಕಾದಂಬರಿಯಲ್ಲಿ ಕಾಣಬಹುದು. ಕೆಳವರ್ಗದ ಹೆಣ್ಣು ಮಾತಂಗಿಯ ಸ್ಪರ್ಶ ಸುಖದಲ್ಲಿ, ಹೆಂಡತಿಯಲ್ಲಿ ಕಾಣಲಾರದಂತಹ ಸಂತೋಷವನ್ನು ಪಡೆಯುತ್ತಾನೆ. ಹಾಗೂ ಹುಚ್ಚು ಹಿಡಿಯುತ್ತದೆ. ಅದೇ ವರ್ಗದ ಮೀರಾಳನ್ನು ಭೋಗಿಸಿ ಮದುವೆಯಾಗಲು ನಿರಾಕರಿಸುವ ಅಥವಾ ಹೆದರುವ ಶ್ರೀನಿವಾಸನಿಗೂ ಹುಚ್ಚು ಹಿಡಿಯುತ್ತದೆ. ವೆಂಕಟರಮಣಯ್ಯನವರು ಹುಚ್ಚನಾಗಿದ್ದಾಗ ಮಾತಂಗಿಯನ್ನು ಪುರಾಣದ ಅರುಂಧತಿಗೆ ಹೋಲಿಸಿದ್ದಾನೆ. ಬೆಟ್ಟಯ್ಯನವರು ಮಗಳ ಮೀರಾಳನ್ನು ಸತ್ಯಭಾಮಳ ಒತ್ತಾಯಕ್ಕೆ ಒಪ್ಪಿಕೊಂಡು ಕೊನೆಗೆ ನಿರಾಕರಿಸುವುದರ ಮೂಲಕ, ಅವಳ ಸಾವಿಗೆ ಕಾರಣನಾಗುವುದನ್ನು ಕಾದಂಬರಿಯಲ್ಲಿ ಕಾಣಬಹುದಾಗಿದೆ.

ವೆಂಕಟರಮಣಯ್ಯನಿಗೆ ಒಬ್ಬ ಮಗ ವೆಂಕಟೇಶ. ಅವನಿಗಿಂತ ಚಿಕ್ಕ ಒಬ್ಬ ಮಗಳು ಸತ್ಯಭಾಮ. ವೆಂಕಟೇಶ ಹನ್ನೆರಡು ವರ್ಷದವನಾಗಿದ್ದಾಗ ಅವರ ಪತ್ನಿ ಸತ್ತರು. ಇನ್ನೂ ಪ್ರಾಯವಿದ್ದರೂ ಮರು ಮದುವೆಯನ್ನು ಮಾಡಿಕೊಳ್ಳಲಿಲ್ಲ. ಮನೆಯಲ್ಲಿ ಬೇಯಿಸಿ ಹಾಕುವವರು ಇರಲಿಲ್ಲ. ಅವನು ಒಪ್ಪಿದಂತೆ ವಿಟ್ಟಲಾಪುರದ ಶ್ಯಾನುಭೋಗರ ಮಗಳು ಜಯಲಕ್ಷ್ಮಿಯನ್ನು ತಂದು ಮದುವೆ ಮಾಡಿದರು. ಮೊದಲನೆಯದೇ ಗಂಡು ಮಗುವಾಗಿದೆ. ಮೊದಲನೆಯ ಹೆರಿಗೆಗೆ ಸೊಸೆ ತವರು ಮನೆಗೆ ಹೋಗಬೇಕಾಗಿತ್ತು. ಆದರೆ ಊರಿನಲ್ಲಿ ಅವಳ ಅಜ್ಜಿ ಮೂರು ತಿಂಗಳಿನಲ್ಲಿ ತಾನೆ ಕೆಟ್ಟ ನಕ್ಷತ್ರದಲ್ಲಿ ಸತ್ತು

ಮನೆಯನ್ನು ಬಿಟ್ಟಿದ್ದಾರೆ. ಆದರೂ ಬಾಣಂತಿತನಕ್ಕೆ ಜಯಲಕ್ಷ್ಮಿಯ ತಾಯಿಯೇ ಇಲ್ಲಿಗೆ ಬಂದಿದ್ದಾರೆ. ಇಪ್ಪಾತ್ತಾರು ವರ್ಷದ ಮಾಧ್ವ ರಾಘವೇಂದ್ರ ತನ್ನ ಹಿಂದಿನ ಬೀದಿಯ ಮಗಳು ಶ್ರೀದೇವಿಯನ್ನು ಪ್ರೀತಿಸಿದ್ದನು. ಹಿರಿಯರು ಒಪ್ಪದಿದ್ದರೆ ಅವನ ಸಂಗಡ ಓಡಿ ಬರಲು ಸಿದ್ಧಳಿರುವುದ್ದಾಗಿ ಚೀಟಿಯನ್ನು ಕಳಿಸಿದ್ದಳು. ಬೇರೆ ಜಾತಿಯವರನ್ನು ಮದುವೆಯಾದರೆ ತಮ್ಮ ಸ್ವಯಾರ್ಜಿತ ಆಸ್ತಿಯಲ್ಲಿ ಒಂದು ಎಕರೆಯನ್ನು ಕೊಡುವುದಿಲ್ಲವೆಂದು ಭೀಮಸೇನರಾಯರು ಹೇಳಿದರು. ಆತನ ಧೈರ್ಯ ಕುಗ್ಗಿತು. ಆ ಕೋಪವನ್ನು ನಾಮಕರಣದ ಸಮಾರಂಭದಲ್ಲಿ ಆತನು ತೀರಿಸಿಕೊಂಡನು.

ಸತ್ಯಭಾಮಳೂ ಸಹ ಮೇಲಗಿರಿಗೌಡರ ಮಗ ಶ್ರೀನಿವಾಸನನ್ನು ಮದುವೆಯಾಗಲು ತೀರ್ಮಾನಿಸಿರುವುದಾಗಿಯೂ, ತಾವು ಆಶೀರ್ವದಿಸಬೇಕೆಂದೂ ಕಾಗದವನ್ನು ಬರೆದಿದ್ದಳು, ಬರೆದಿದ್ದನ್ನು ನೋಡಿ ಕೋಪಗೊಂಡು ಯಾರಾದರೂ ಒಬ್ಬ ವ್ಯವಸಾಯ ಮಾಡುವ ಬ್ರಾಹ್ಮಣ ಹುಡುಗನಿಗೆ ಕೊಟ್ಟು, ಸ್ವಲ್ಪ ದಿನದಲ್ಲಿ ತಾಳಿ ಕಟ್ಟಿಸಿ ಬಿಡೋಣಎಂದಿದ್ದರು. ನಮ್ಮಗೆ ಮರ್ಯಾದೆ ಸಿಕ್ಕುಲ್ಲ ಮುಂದೆ ಅವಳಿಗೆ ಬೇರೆ ಗಂಡು ಸಿಕ್ಕುಲ್ಲ ಎಂದು ಸುಮ್ಮನಾದರು, ಪಟೇಲರು ಚಿಕ್ಕ ವಯಸ್ಸಿನಲ್ಲಿ ರಾಜದರ್ಪದಿಂದ ಪಟೇಲಿಕೆ ಮಾಡಿ. ಸುತ್ತಣ ಹಳ್ಳಿಗಳ ನ್ಯಾಯ, ಪಂಚಾಯಿತಿಗಳನ್ನು ಮಾಡಿದ ಪಟೇಲರು ವೃದ್ಧಾಪ್ಯದಲ್ಲಿ ಆಧ್ಯಾತ್ಮಿಕದತ್ತ ಸರಿಯುತ್ತಾ, ದೇವತಾರ್ಚನೆಯಲ್ಲಿ ಕಾಲ ಕಳೆಯುತ್ತಿದ್ದಾರೆ. ವೆಂಕಟರಮಣಯ್ಯನವರು ಚಿಕ್ಕವಯಸ್ಸಿನಿಂದಲೇ ಕಲಿತ ಹಠ, ತಾಯಿ ಇಲ್ಲದ್ದು, ತಬ್ಬಲಿ ಹೆಣ್ಣು ಹುಡುಗಿ ಅಂತ, ಅವಳು ಹೇಳಿ ಕೇಳಿದ ಹಾಗೆ ಕುಣಿದರು, ಇಲ್ಲದಿದ್ದರೆ ಹಟ ಬೆಳೀತಲೇ ಇರಲಿಲ್ಲ, ಹೆಣ್ಣು ಹುಡುಗಿಗೆಂಥ ಹಟ? ಅದು ಗಂಡಸಿನಿಗಿರಬೇಕಾದ್ದು ಎಂದನು. ಬೆಂಗಳೂರಿಗೆ ಬೆಟ್ಟಯ್ಯನವರ ಜೊತೆಗೂಡಿ ಬಂದಿದ್ದರು. ಅವಳು ಹತ್ತಿರ ಬಂದು “ಈಗ ಬಂದ್ಯಾ ಅಪ್ಪ”?[೧] ಎಂದು ಕೇಳಿದರೂ ಮಾತನಾಡಲಿಲ್ಲ “ರೂಮಿಗೆ ಹೋಗಾಣ ನಡೀರಿ”[೨] ಎಂದಳು. ರೂಮಿಗೆ ಬಂದಾಗ “ಇದೇನು ಬರೆದಿರೊದು ಬಗುಳೇ”[೩] ಎಂದಾಗ ಮೆಲ್ಲಗೆ ಮಾತನಾಡು ಎಂದಳು. ಆದರೆ ಅವರು ನೀನು ಮಾಡುವ ಕೆಲಸಕ್ಕೆ ಮರ್ಯಾದೆಯೊಂದು ಕೇಡು ಹೊಲೆಮುಂಡೆ ಎಂದು ಬಾಗಿ ಮಗಳೆನ್ನದೆ ಮಾನವೀಯತೆಯನ್ನು ಮರೆತು, ಒಳಬಾಗಿನಲ್ಲಿ ಬಿಟ್ಟಿದ್ದ ಚಪ್ಪಲಿಗಳನ್ನು ತೆಗೆದುಕೊಂಡು ಅವಳ ನೆತ್ತಿ, ಬೆನ್ನು, ಭುಜಗಳ ಮೇಲೆ ಎತ್ತಿ ಭಾರಿಸಿ ಬಿಟ್ಟರು. ಮಗಳು ಮಾತ್ರ ಸ್ವಲ್ಪವೂ ವಿರೋಧಿಸದೆ ತನ್ನನ್ನು ತಾನು ಪೂರ್ತಿಯಾಗಿ ಶಿಕ್ಷೆಗೆ ಸಮರ್ಪಿಸಿಕೊಂಡು ತಲೆಬಾಗಿ ನಿಂತಿದ್ದಳು. ಮೇಲಿದ್ದ ಸಂಸಾರದ ಹೆಂಗಸು ಓಡಿಬಂದಳು. ತಂದೆಯವರು ಇದ್ದಕ್ಕಿದ್ದ ಹಾಗೆ ಕೆಳಗೆ ಬಿದ್ದು ಬಿಟ್ಟರು. ಅವರಿಗೆ ಪ್ರಜ್ಞೆ ತಪ್ಪಿ ಹೋಗಿದೆ ಎಂದು ಬೆಟ್ಟಯ್ಯನವರಿಗೆ ಸ್ಪಷ್ಟವಾಯಿತು. ಹಿಂತಿರುಗಿ ನೋಡಿ ತಲೆಗೆ ನೀರನ್ನು ತಟ್ಟಿ ಗಾಳಿ ಬೀಸಿದಳು. ಪಕ್ಕದ ಸಂಸಾರದ ಹೆಂಗಸು ಬಂದು ಯಾವನೋ ಇವನು ಕೈಸೇದಿ ಹೋಗ, ಮೈ ಎಲ್ಲ ರಕ್ತ ಬರುವ ಹಾಗೆ ಹೊಡೆದಿದ್ದಾನೆ ಎಂದಳು.

ನಮ್ಮ ತಂದೆಯವರು ಸಿಟ್ಟಿನ ಸ್ವಭಾವ ಕೋಪ ಮಾಡಿಕೊಂಡಿದ್ದಾರೆ. ನಿಮ್ಮ ಮನೆಗೆ ನಡೀರಿ ಎಂದು ಹೇಳಿದಳು. ತನಗೆ ಅವಮಾನವಾದಂತೆ ಸರಕ್ಕನೆ ತಿರುಗಿ ಹೋದಳು. ಸತ್ಯಭಾಮಳು ವೈದ್ಯರನ್ನು ಕರೆದುಕೊಂಡು ಬನ್ನಿ ಎಂದಳು. ನೀರನ್ನು ತಟ್ಟಿ ಜೋರಾಗಿ ಗಾಳಿ ಬೀಸಿದಾಗ ಪ್ರಜ್ಞೆಬಂತು. ಕಣ್ಣು ಬಿಟ್ಟರು, ಬೆಟ್ಟಯ್ಯನವರಿಗೆ ಬುದ್ಧಿಯನ್ನು ಹೇಳು ಎಂದು ಕುಳಿತುಕೊಂಡರು. ಸತ್ಯಭಾಮಳು ಶ್ರೀನಿವಾಸನನ್ನು ಮದುವೆ ಮಾಡಿಕೊಂಡು ಬಂದರೂ, ಸಹ ಅಡುಗೆ ಮನೆ, ದೇವರ ಮನೆ ಸೇರಿಸಬೇಡ, ಸಂಬಂಧಿಕರು ಬಹಿಷ್ಕಾರ ಹಾಕುವುದು ಬೇಡ ತಲೆತಲಾಂತರದಿಂದ ಬಂದ ದೇವಸ್ಥಾನದ ಪೂಜೆ ಅದರ ಜಮೀನು ತಪ್ಪಿಹೋಗುವುದು ಬೇಡ, ನೀವು ವರ್ಷಕ್ಕೊಂದು ಸಲ ಬೆಂಗಳೂರಿಗೆ ಬನ್ನಿ, ಕಾಲನ್ನು ಸಹ ಮುಟ್ಟದೆ ಮೈಲಿಗೆ ಮಾಡದ ಹಾಗೆಯೇ ನೆಲಕ್ಕೆ ಬಗ್ಗಿ ನಮಸ್ಕಾರ ಮಾಡುತ್ತೀನಿ. ಆಶೀರ್ವಾದ ಮಾಡಿ ಎಂದಳು. ವೆಂಕಟರಮಣಯ್ಯನವರು ನೋಡಿ ಬೆಟ್ಟಯ್ಯನವರ ಸಾಕಿದ ಮಗಳು ಹೇಗೆ ಬುದ್ಧಿವಂತಿಕೆಯಿಂದ ಮಾತನಾಡುತ್ತಾಳೆ ಎಂದರು. ಆದರೆ ಸತ್ಯಭಾಮಳು ಹೀಗೆಯೇ ಒಂದು ದಿನ ಅಪ್ಪನನ್ನು ಹುಡುಕಿಕೊಂಡು ತೋಟಕ್ಕೆ ಹೋಗಿದೆ. ತೋಟದಲ್ಲಿ ಮಾತಂಗಿ ಕುರುಂಬಾಳೆ ಕಟ್ಟಿಕಂತಿದ್ಲು, ನನ್ನ ಮಾತನಾಡಿಸಿದಳು. ಆಗ ಅವಳ ಹತ್ತಿರ ನಿಂತಿದ್ದ, ದಾರಿಯಲ್ಲಿ ಬರುತ್ತಿದ್ದ ಯಾವುದೋ ಊರಿನವರು, ತೋಟದ ಯಜಮಾಂತಿ ಎಂದು ತಿಳಿದುಕೊಂಡು ಕುಡಿಯಕ್ಕೆ ಎಳನೀರು ಕೇಳಿದರು, ಮಾತಂಗಿ ತಾನು ಯಜಮಾಂತಿಯಲ್ಲ ಎಂದರೂ ಅವರು ಕೇಳಲೇ ಇಲ್ಲ. ಕೊನೆಗೆ ನನ್ನನ್ನು ತೋರಿಸಿ, ಏನವ್ವಾ ನಿಮ್ಮ ಮಗಳೇ? ಎಂದು ಕೇಳಿದರು. ಅಲ್ಲ ತೋಟದ ಯಜಮಾನರ ಮಗಳು ಎಂದಳು. ಆದರೂ ಸಹ ಅವರು ಎಳನೀರು ಕೊಟ್ಟರೆ ಖರ್ಚಾಯ್ತದೆ ಅನ್ನುವ ಹಂಗಿದ್ರೆ ಇಲ್ಲ ಅನ್ನವ್ವ, ಹೊಟ್ಟೇಲಿ ಹುಟ್ಟಿದ ಮಗಳನ್ನ ಯಾಕೆ ಇಲ್ಲ ಅಂತೀಯ? ಎಂದು ಹೊರಟು ಹೋದರು.

ಮೇಲಗಿರಿಗೌಡರ ಪತ್ನಿಯಾದ ರಂಗಮ್ಮನಿಗೆ ಒಂದು ಕನಸಾಯ್ತು, ಊರಿನಲ್ಲಿರುವ ದೊಡ್ಡಗೌಡರಿಗೆ ಸಾಯುವ ಕಾಲ ಹತ್ತಿರ ಬಂದಿದೆ. ಮಾಡಬಾರದು ಮಾಡಿದರೆ ಆಗಬಾರದು ಆಗುತ್ತದೆ ಅಂತ ಗೊತ್ತಿಲ್ವಾ? ಈ ಮದುವೆಗೆ ನೀನ್ಯಾಕ್ಕೆ ಹೂಂ ಅಂದೆ? ಈಗ ನನ್ನ ವಂಶ ನಿಂತೋಯ್ತಲ, ಯಾರ ತಪ್ಪು? ಅಂತ ತನ್ನ ಮೇಲೆ ಕೋಪ ಮಾಡುತ್ತಿದ್ದಾರೆ. ಪಾಳೆಗಾರರ ಮನೆಯವರು ನನ್ನ ಮಗಳ ಜಾತಿಯನ್ನು ಕೆಡಿಸಿದರು. ವೆಂಕಟರಮಣಯ್ಯನವರು ಅವರ ವಂಶ ಹಾಳಾಗು ಅಂತ ಬಲಗೈಲಿ ಗಂಟೆಯನ್ನು ಬಾರಿಸಿಕೊಂಡು, ಎಡಗೈಲಿ ಮಂಗಳಾರ್ತಿ ಮಾಡುತ್ತಾ ಶಾಪ ನುಡಿದಿದ್ದಾರೆ. ತಿರುಮಲಾಪುರದ ದೇವರ ಮುಖ ಮಂಗಳಾರತಿ ಮಾಡುವಾಗ ಬೆಳಕಿನಲ್ಲಿ ಉರಿಯುತ್ತಿದೆ. ಈ ದೇವಸ್ಥಾನವನ್ನು ಕೆಡವಿ ಬೇರೆ ಊರಿಗೆ ಹೋಗುತ್ತೇನೆ ಎಂದು ಮೈಮೇಲೆ ಬಂದಾಗ ಅಮ್ಮನ ಪೂಜಾರಿ ಹೇಳುವಂತೆ ನುಡಿದು ನೆಲದ ಮೇಲೆ ಒದೆಯುತ್ತಿದೆ. ದೇವಸ್ಥಾನದ ಹಿಂಭಾಗದ ಗೋಡೆಯು

ಕುಸಿಯುತ್ತಿದೆ. ರಂಗಮ್ಮನಿಗೆ ತಕ್ಷಣ ಎಚ್ಚರವಾಯಿತು. ರಂಗಮ್ಮನು ದೇವರ ಪಟದ ಹತ್ತಿರ ಹೋಗಿ ಇವನಿಗೆ ಒಳ್ಳೆಯ ಬುದ್ಧಿಯನ್ನು ಕೊಡು. ನಮ್ಮದೆ ಗೌಡಗಳ ಜಾತಿಯಲ್ಲಿ ಹೆಣ್ಣು ತಂದು ಮದುವೆಯನ್ನು ಮಾಡಿಕೊಂಡರೆ ನಿನ್ನ ಗುಡಿಗೆ ಹೊಸಗೋಡೆಯನ್ನು ಕಟ್ಟಿಸುತ್ತೇನೆ. ನಿನ್ನ ಕಣ್ಣು ಮುಂದೆ ಮದುವೆ ಮಾಡಿಸುತ್ತೆನೆ. ಪೂಜಾರಯ್ಯನ ಕೈಲೇ ಗಂಡು ಹೆಣ್ಣಿಗೆ ಆರ್ಶೀವಾದ ಮಾಡಿಸುತ್ತೇನೆ. ಸ್ವಲ್ಪ ಹೊತ್ತಿನಲ್ಲಿ ಮನಸ್ಸಿಗೆ ಸಮಾಧಾನವಾಯಿತು.

ಮೇಲಗಿರಿಗೌಡನ ಮಗ ಶ್ರೀನಿವಾಸನು ಬೆಳಿಗ್ಗೆ ಎದ್ದ ತಕ್ಷಣ ಸತ್ಯಭಾಮಳ ಹತ್ತಿರ ಬಂದನು. ಆದರೆ ಅವಳು ನೆನ್ನೆ ರಾತ್ರಿ ನಿಮ್ಮ ತಂದೆಯ ಹತ್ತಿರ ಮಾತನಾಡಿದ್ದಿರಾ? ಎಂದು ಕೇಳಿದಳು. ಆದರೆ ಶ್ರೀನಿವಾಸನು ಮಾತೇನಾಡೊದು! ನಮ್ಮವ್ವ ಬೇಡ ಎನ್ನುತ್ತಾಳೆ ಎಂದನು. ನಮ್ಮ ತಂದೆಯವರು ಒಪ್ಪಿಗೆಯನ್ನು ಕೊಟ್ಟಿದ್ದಾರೆ. ಆದ್ದರಿಂದ ಇಲ್ಲಿಯೇ ಇರುತ್ತೇನೆ ಎಂದನು. ಸತ್ಯಭಾಮಳು ಗಂಡಸರು ಮನೆಗೆ ಕರೆದುಕೊಂಡು ಹೋಗಬೇಕೇ ಹೊರತು. ಹೆಂಡತಿಯ ಬಾಡಿಗೆ ರೂಮಿಗೆ ಬರುತ್ತೀನಿ ಎನ್ನಬಾರದು ಎಂದಳು. ಕುಪ್ಪಣ್ಣಯ್ಯಂಗಾರರು ಬಂದು ನಮ್ಮ ರೂಮು ಖಾಲಿಮಾಡಿ ಕೊಡಿ ಎಂದರು. ಇದ್ದಕ್ಕಿದ್ದ ಹಾಗೆ ರೂಮು ಖಾಲಿ ಮಾಡುವುದಕ್ಕೆ ಹೇಳಿದರೆ ಹ್ಯಾಗಾಗುತ್ತೆ? ಆದರೂ ನಿಮಗಾಗಿರುವ ತೊಂದರೆ ಏನು? ಎಂದಳು ಅವರು ಅದಕ್ಕೆ ಅವನು ದುಡ್ಡು ಸಂಪಾದನೆ ಮಾಡುವುದಕ್ಕೆ ಹೊಟೇಲಿನವರು ಕಟ್ಟಿಸುತ್ತಾರೆ. ಅಲ್ಲಿ ಏನು ಬೇಕಾದರೂ ಮಾಡಿಕೊಳ್ಳಿ, ನಮ್ಮನೇಲಿ ಹೆಣ್ಣು ಮಕ್ಕಳಿದ್ದಾರೆ. ಉಳಿದ ಬಾಡಿಗೆಯೋರು ತೊಂದರೆ ಮಾಡುತ್ತಾರೆ ಎಂದರು. ಸತ್ಯಭಾಮಳನ್ನು ದಾರಿ ತಪ್ಪಿದ ನಡತೆ ಎಂದು ತಿಳಿದುಕೊಂಡಿದ್ದಾರೆ. ಆದ್ದರಿಂದಲೇ ನಾನು ರೂಮನ್ನು ಬಿಡುವುದಿಲ್ಲ. ಬೇಕಾದರೆ ಕೋರ್ಟಿಗೆ ಹೋಗಿ ಅವಮಾನವಾಗುವಂಥ ಮಾತುಗಳು ಬಂದರೆ ಪೋಲಿಸರಿಗೆ ಕಂಪ್ಲೇಂಟು ಕೊಡುತ್ತೀನಿ, ಹೆಂಗಸಿನ ಹತ್ತಿರ ಮರ್ಯಾದೆಯಾಗಿ ಮಾತನಾಡಬೇಕು ಎಂದಳು. ಆದರೆ ಹೆಚ್ಚು ಕಮ್ಮಿ ಮಾತಾಡಿದರೆ ನಾನು ಸುಮ್ಮನಿರುವುದಿಲ್ಲ. ನನ್ನ ರೂಮಿಗೆ ಯಾರಾದರೂ ಬರಬಹುದು. ಕೇಳುವ ಅಧಿಕಾರ ಯಾರಿಗೂ ಇಲ್ಲ ಎಂದಳು.

ಶ್ರೀನಿವಾಸ ತನ್ನ ಸ್ನೇಹಿತರಾದ ಮೂರು ಜನರನ್ನು ಸಾಕ್ಷಿಗೆ ಕರೆದುಕೊಂಡು, ಮದುವೆಯಾಗಬೇಕಾದ ದಿನ ಶೂದ್ರನಾದ ಶ್ರೀನಿವಾಸ ಮತ್ತು ಬ್ರಾಹ್ಮಣರಾದ ಸತ್ಯಭಾಮರೂ ಸಬ್‌ರಿಜಿಸ್ಟಾರರ ಆಫೀಸಿಗೆ ಬಂದರು. ವಿಶೇಷವಾದ ವೇಷಭೂಷಣಗಳೇನೂ ಇಲ್ಲ. ಇಬ್ಬರೂ ತಮ್ಮ ನಿತ್ಯದ ಉಡಿಗೆ ತೊಡುಗೆಯಲ್ಲಿದ್ದರು. ಸಾಹೇಬರು ರಜದ ಮೇಲಿದ್ದಾರಿಂದ ರಿಜಿಸ್ಟಾರ್ ಆಗುವುದಿಲ್ಲ ಎಂದು ಆಫೀಸಿನ ಮುಖ್ಯ ಗುಮಾಸ್ತ ಹೇಳಿದರು. ಉಳಿದ ರಿಜಿಸ್ಟಾರ್‌ಗಳನ್ನು ಹೇಗೆ ಮಾಡ್ತಿದೀರಿ? ಅದಕ್ಕೆ ಸಾಹೇಬರು ಬೇಡವೇ? ಎಂದಾಗ ಉತ್ತರ ತೋಚದೆ ತಬ್ಬಿಬ್ಬಾದ. ಮದುವೆಯನ್ನು ಮಾಡಕೂಡದು ಎಂದು ಮಂತ್ರಿಯವರಿಂದ ಆಕ್ಷೇಪ ಬಂದಿದೆ ಎಂದನು. ಮೇಲಾಧಿಕಾರಿ ಇಲ್ಲದ್ದರಿಂದ ಸದರಿ

ಪಾರ್ಟಿಯು ನಾಲ್ಕು ದಿನದ ನಂತರ ಬರತಕ್ಕದು ಎಂದಾಗ ಹೊರಗೆ ಬಂದು ಸತ್ಯಭಾಮಳಿಗೂ ಮತ್ತು ಸ್ನೇಹಿತರಿಗೂ ವಿಷಯವನ್ನು ಹೇಳಿದ. ಸತ್ಯ ಸ್ತಂಭೀಭೂತಳಾದಳು. ಆದರೆ ಸತ್ಯಭಾಮಳು ಮದುವೆಯ ವಿರೋಧ ಬರೀ ಯಜಮಾಂತಿಯದಲ್ಲ ಅವರ ಜೊತೆಗೆ ಯಜಮಾನರದ್ದು ಇದೆ ಎಂದು ತಕ್ಷಣ ಅರ್ಥವಾಯಿತು.

ಶ್ರೀನಿವಾಸನು ನಾನು ಅವಳನ್ನು ಮದುವೆ ಮಾಡಿಕೊಳ್ಳುತ್ತೀನಿ ಎಂದಾಗ, ಅವರ ತಾಯಿಯು ಹಗ್ಗ ತಗಂಡ್ ನೇಣ್ ಆಕ್ಯತ್ತೀನಿ ಎಂದಳು, ಯಜಮಾನರು ಹೆತ್ತ ತಾಯೀನ ಕೊಲ್ಲಾಕೆ ತಾನೇ ಮಗ ಹುಟ್ಟೂದು? ಎಂದು ಹೇಳಿ ಹೊರಟು ಹೋದರು. ಶ್ರೀನಿವಾಸನನ್ನು ತಿರುಮಲೇಗೌಡರ ಹತ್ತಿರ ಕರೆದುಕೊಂಡು ಹೋದರು. ಅದಕ್ಕೆ ಗೌಡರು ನಮ್ಮ ಮರ್ಯಾದೆ ಕಳೆಯುವುದಕ್ಕೆ ಹೊರಟಿದ್ದಾನೆ. ರಿಜಿಸ್ಟಾರ್ ಮದುವೆ, ಮನೆ, ಮಠ ಇರೋರು ಮಾಡುವ ಕೆಲ್ಸನಾ? ಎಂದರು. ರಂಗಮ್ಮಳು ಐದು ವರ್ಷದ ತನಕ ಮಕ್ಕಳಿರಲಿಲ್ಲ. ಗೋಪುರದ ಕಳಸಕ್ಕೆ ಚಿನ್ನದ ತಗಡು ಹೊಡೆಸುತ್ತೇನೆ ಎಂದರು ಹರಕೆ ಮಾಡಿದಾಗ ನೀನು ಹುಟ್ಟಿದೆ ಈಗ ದೇವರೇ ಇಲ್ಲ ಅಂತೀಯ? ನಾಳೀಕೆ ನಿನ್ನ ಹುಟ್ಟಿಸಿದ ಅಪ್ಪನನ್ನೆ ಇಲ್ಲ ಅಂತೀಯಾ? ಎಂದಳು.

ರಂಗಮ್ಮನಿಗೆ ಸತ್ಯಭಾಮಳು ಪೋನು ಮಾಡಿದಾಗ ತಾಟಗಿತ್ತಿ ನಮ್ಮವ್ವ ಶ್ರೀನಿವಾಸ ಬೆಂಗಳೂರಾಗಿಲ್ಲ. ಎಲ್ಲಾ ಮರ್ಯಾದೆಯನ್ನು ಕಳೆದುಕೊಂಡಿದ್ದೀಯಾ. ಊರಿನಲ್ಲಿ ನಿನ್ನ ಪಾಡಿಗೆ ಇರು. ಆತನು ಗಂಡು ಹುಡಗನಾಗಿದ್ದರಿಂದ ಯಾರು ಕೇಳುವುದಿಲ್ಲ. ನೀನು ಹಿಂಗಾಗುತ್ತೀಯಾ ಅಂದುಕೊಂಡಿರಲಿಲ್ಲ ದಗಾಬಾಜಿ? ಎಂದಳು. ಆದರೆ ಸತ್ಯಭಾಮಳು ಈ ರೀತಿಯಲ್ಲಿ ಮಾತನ್ನು ಆಡುತ್ತಾರೆಂದು ಎಂದು ತಿಳಿದುಕೊಂಡಿರಲಿಲ್ಲ. ಶ್ರೀನಿವಾಸ ಕಾಗದವನ್ನು ಸತ್ಯಭಾಮಳಿಗೆ ಬರೆದಿದ್ದನು. ಅದರಲ್ಲಿ ಮದುವೆ ಎನ್ನುವುದು ಎಲ್ಲರಿಂದ ಒಪ್ಪಿಗೆಯಾಗಬೇಕು. ನಮ್ಮಿಬ್ಬರ ಮದುವೆಯಿಂದ ಯಾರು ಸಹ ಸಾವನ್ನು ತಂದುಕೊಳ್ಳಬಾರದು. ನಿನ್ನ ಹೆಸರನ್ನು ಮನಸ್ಸಿನಲ್ಲಿಟ್ಟು ಜೀವನವನ್ನು ಮಾಡುತ್ತೇನೆ. ನನ್ನನ್ನು ಮರೆತು ಬಿಡು ಎಂದು ಬರೆದಿದ್ದನು. ಸತ್ಯಭಾಮಳು ಓದಿದ ತಕ್ಷಣ ಮಂಕುಹಿಡಿಯಿತು. ಬ್ರಾಹ್ಮಣರ ಮಗಳನ್ನು ಶೂದ್ರನಾದ ನಾನು ಹೆಂಡತಿಯೆಂದು ಹೇಗೆ ಪರಿಗ್ರಹಿಸಲಿ? ನಾವುಗಳು ಅವರಿಗೆ ಕಾಣಿಕೆಯನ್ನು ಕೊಡಬೇಕೇ ಹೊರತು ಅವರಿಂದ ಪಡೆದುಕೊಳ್ಳಬಾರದು. ಆದರೆ ಬರೀ ಆಶೀರ್ವಾದವನ್ನು ಪಡೆಯಬಹುದು. ಶ್ರೀನಿವಾಸನ ಹತ್ತಿರ ಹೋಗಿ ಏನೆಂದು ಕೇಳುವುದು ಎಂಬ ಪ್ರಶ್ನೆ ಸತ್ಯಭಾಮಳಿಗೆ ಬಂದಿತು. ಆದರೂ ಸಹ ಏನು ಕೇಳುವುದು? ಎಂಬ ಪ್ರಶ್ನೆ ಸತ್ಯಭಾಮಳಿಗೆ ಬಂದಿತು. ಆದರೂ ಸಹ ಏನು ಕೇಳುವುದು? ಕಣ್ಣೀರು ಹಾಕುವುದೇ? ನನ್ನನ್ನು ನಡುನೀರಿನಲ್ಲಿ ಮುಳುಗಿಸಬೇಡ ಎಂದು ವಿನಯ ಮಾಡುವುದೇ? ಯಾವುದು ಗೋಚರಿಸಲಿಲ್ಲ.

ಮಾತಂಗಿ ಮಾದಿಗ ಕೇರಿಯವಳು, ಸ್ವಂತ ಗುಡಿಸಲನ್ನು ಬಿಟ್ಟರೆ ಬೇರೆ ಆಸ್ತಿ ಇರುವುದಿಲ್ಲ. ಇಪ್ಪತ್ತೇಳು ವಯಸ್ಸಿನ ವಿಧವೆ, ಅವಳ ಜಾತಿಯಲ್ಲಿ ಎರಡನೇ ಮದುವೆ ಮಾಡಿಕೊಳ್ಳುವವರು ಸಿಕ್ಕಿದರೆ ಸಿದ್ಧಳಾಗಿದ್ದಳು. ಆದರೆ ಯಾರು ಸಿಕ್ಕಿರಲಿಲ್ಲ. ಆಕೆಯ ಬಣ್ಣ ಕಪ್ಪಾದರೂ ಹೊಸ ಮಳಕದಂತೆ ಮೋಪಾಗಿದ್ದಳು. ವೆಂಕಟರಮಣಯ್ಯನವರ ತೋಟದಲ್ಲಿ ಸೋಗೆ ಕಟ್ಟಿಕೊಳ್ಳುತ್ತಿದ್ದಳು. ಹಿಂದಿನಿಂದ ಬಂದು ಏನೇ ಇದು? ಎಂದು ವೆಂಕಟರಮಣಯ್ಯನವರು ಕೇಳಿದರು. ಮಾತಂಗಿ ಹೆದರಿಕೊಂಡೆ ಹಿಟ್‌ಬೇಸಾಕ ಸದ್ಯ ಪುಳ್ಳೆ ಇರ್ನಿಲ್ಲ ಕಣ್ಣಯ್ಯಾ ಎಂದು ನಿಂತುಕೊಂಡಳು. ಅವಳ ಮೈ ಕಟ್ಟಿಗೆ ಸೋತು ಹೇಗೆ ಮಾತನಾಡಬೇಕೆಂದು ತೊಚಲಿಲ್ಲ. ತಗ ನಾನೇನು ಬೇಡ ಅನ್ನಿಲ್ಲ. ರೊಟ್ಟಿಗೆ ಕಾಯಿ ಬೇಕಾ? ಎಂದು ಕೇಳಿದರು. ಅದಕ್ಕೆ ಮಾತಂಗಿ ಕೊಟ್ಟರೆ ಬಡಮುಂಡೆ ಕಡ್ಕಂಡು ತಿಂತೀನಿ ಎಂದಳು. ಕತ್ತಲೆ ಆಯಿತು ಹೋಗುತ್ತೇನೆ ಎಂದಾಗ ಹ್ವರೆ ಇಳಿಸಿ ಕಾಯಿ ದುಡ್ಡು ಕೊಡ್ತಿನಿ ಎಂದರು. ವೆಂಕಟರಮಣಯ್ಯನ ಮಾತುಗಳು ಅವಳಿಗೆ ಅರ್ಥವಾಯಿತು. ಅದಕ್ಕೆ ಮಾತಂಗಿಯು ಅಯ್ಯನವರ ಹೆಂಡತಿ ತೀರಿಕೊಂಡು ಮೂರು ವರ್ಷವಾಗಿದೆ. ಇನ್ನೂ ಮೂವತ್ತೆರಡರ ಪ್ರಾಯವಿರುವುದರಿಂದ ಕೇಳುವುದರಲ್ಲಿ ತಪ್ಪಿಲ್ಲ. ಆದರೆ ಕರೀಕಲ್ಲಿನ ಸ್ವಾಮಿಯನ್ನು ಮುಟ್ಟಿ ಪೂಜೆ ಮಾಡುವ ದೇವರ ಪೂಜಾರಿಗಳು, ಅವರು ತನ್ನನ್ನು ಮುಟ್ಟಿದರೆ ದೇವರು ಕಷ್ಟವನ್ನು ಕೊಟ್ಟರೆ ಎಂಬ ಭಯವು ಅವಳನ್ನು ಆವರಿಸಿತು.

ವೆಂಕಟರಮಣಯ್ಯನವರು ಸಹ ಅರ್ಚನೆ ಮಾಡುವ ನಾನು ಅವಳನ್ನು ಮುಟ್ಟುವುದು ನ್ಯಾಯವೇ? ಎಂಬ ಮನಸ್ಸು ಬಂದರೂ ಆದರೆ ಅದೇ ಮನಸ್ಸು ಸಾಧ್ಯವಿಲ್ಲವೆಂದು ಶೃತಿಯಂತೆ ನುಡಿಯುತ್ತಿತ್ತು. ಮರುದಿನವೂ ಅವರು ಸಂಜೆಯಾಗಿ ಕತ್ತಲೆಯಾದ ಮೇಲೆ ತೋಟಕ್ಕೆ ಹೋದರು. ಅವಳು ಸಹ ಸ್ವಲ್ಪ ಹೊತ್ತಿಗೆ ಬಂದಳು. ಸೋಗೆಯ ಒಟ್ಟಲಿನ ಸಂದಿಯಲ್ಲಿ ಅವಳನ್ನು ಮುಟ್ಟುವ ಮೊದಲು ತಮ್ಮ ಅಂಗಿ ಪಂಚೆಗಳನ್ನು ಬಿಚ್ಚಿ ಒಂದು ಕಡೆ ಇಟ್ಟು, ಹೆಗಲ ಮೇಲೆ ಹಾಕಿಕೊಳ್ಳುವ ಚೌಕವನ್ನು ಸುತ್ತಿಕೊಂಡರು. ನನ್ನ ಅವರು ಪರಸ್ಪರ ಹೆಚ್ಚು ಮಾತನ್ನು ಆಡಿರಲಿಲ್ಲ. ಈ ದಿನ ಸ್ವಲ್ಪ ವಿರಾಮವಾಗಿ ಆಡಿದರು. ತಮ್ಮ ಕೈಲಿ ಮಡಿಸಿ ಇಟ್ಟುಕೊಂಡಿದ್ದ ಹತ್ತು ರೂಪಾಯಿಯನ್ನು ತೆಗೆದುಕೊಂಡು ಬಾಳೇಕಾಯಿಗೆ ಗಿಡಗಿಕೊಂಡಳು. ಅವಳು ಆಡುವ ಮಾತುಗಳನ್ನು ಕಂಡು ಮನಸ್ಸಿಗೆ ಧೈರ್ಯವೂ ಬಂದು ಮೆಚ್ಚುಗೆಯಾಯಿತು. ನಾವು ಮಾಡುವ ವಿಷಯ ಯಾರಿಗೂ ಗೊತ್ತಾಗಬಾರದು. ಆದರೆ ಮಾತಂಗಿಯು ನಿಯತ್ತಿನ ಹೆಣ್ಣಾದರಿಂದ ಯೋಚನೆ ಮಾಡಬೇಡ ಬುಡಯ್ಯ? ಎಂದಳು. ಮಾತಂಗಿ ಪಿಸುಮಾತಿನಲ್ಲಿ ಅಮವಾಸ್ಯೆಯ ಮೊದಲು ಕತ್ತಲೆ ಇರುವುದರಿಂದ ಇಬ್ಬರೂ ಬರೋಣ, ತಿಂಗಳ ಬೆಳಕು ಇರುವಾಗ ಬರುವುದು ಬೇಡ, ಆದರೆ ತೋಟದ ಬೇಲಿಯನ್ನು ಹಾಕಿಸಿ ಬಿಡಿ ಎಂದಳು. ಹೀಗೆಯೇ ಕಳೆಯುತ್ತಿರುವಾಗ ಒಂದು ದಿನ ರಾತ್ರಿ ಮಾತಂಗಿಯು ಬಸುರಿಯಾಗಿದ್ದೇನೆಂದು ಹೇಳಿದಾಗ ಅವರು

ಗಾಬರಿಯಾದರು. ಆದರೂ ಸಹ ಅವರ ಪಕ್ಕದಲ್ಲಿ ಕುಳಿತು. ಆಸ್ಪತ್ರೆಗೆ ಹೋಗಿ ಸೇರಿಸಿ ಸರಿ ಪಡಿಸಿಕೊಂಡು ಬರುವ ಜವಾಬ್ದಾರಿ ಹೊರುವವರು ಯಾರು? ಈಗ ಬಂದಿರುವ ಅಪಾಯದಿಂದ ಪಾರಾಗುವುದು ಹೇಗೆ? ಎಂದು ಯೋಚಿಸುತ್ತಿರುವಾಗ ಮಾತಂಗಿ ವ್ಯವಹಾರದಲ್ಲಿ ಎಚ್ಚರಿಕೆಯ ಹೆಣ್ಣಾಗಿದ್ದಳು. ಕೂಲಿ ಕೊಡುವುದನ್ನು ಬಿಡಲಿಲ್ಲ. ಹೊರಗಿನ ಜನರಿಗೆ ಅನುಮಾನ ಬರದಂತೆ ಜೀವನವನ್ನು ಮಾಡುತ್ತಿದ್ದಳು. ವೆಂಕಟರಮಣಯ್ಯ ಮಾತಂಗಿಯ ಕೈಹಿಡಿದು ಯಾವತ್ತೂ ನಿನ್ನ ಹೊಟ್ಟೆ ಮೇಲೆ ಹೊಡೆದಿಲ್ಲ. ನನ್ನ ಮರ್ಯಾದೆ ಕಾಪಾಡೋದು ನಿನ್ನ ಮೇಲಿದೆ ಎಂದರು. ಆದರೆ ಅವಳು ನಿಮ್ಮಪಾದ ಬೇರೆಯಲ್ಲ? ಆ ತಿಮ್ಮಪ್ಪನ ಪಾದ ಬೇರೆಯಲ್ಲ? ಮರ್ಯಾದೆ ಕಳೆಯುವ ಮುಂಡೆಯಲ್ಲ ಎಂದು ಅವರ ಕಾಲನ್ನು ಮುಟ್ಟಿ ಹೇಳಿದಳು.

ಮಾತಂಗಿ ಅಂದಿನಿಂದ ಕಣ್ಮರೆಯಾದಳು. ಆಕೆಗೆ ಏನೂ ಸಹ ತೊದರೆಯಾಗಬಾರದೆಂದು ಮನಸ್ಸಿನಲ್ಲಿ ಹೇಳಿಕೊಳ್ಳುತ್ತಿದ್ದರು. ಶಿವಗೆರೆಯ ಕೊಪ್ಪಲಿನಲ್ಲಿ ಅವಳ ಜಾತಿಯವನೇ ಒಬ್ಬ ಹೆಂಡತಿ ಸತ್ತವನಿದ್ದ, ಅವನನ್ನು ಸೀರುಡಿಕೆ ಮಾಡಿಕೊಂಡು ಆ ಊರಿನಲ್ಲಿ ಇದ್ದಳು. ವೆಂಕಟರಮಣಯ್ಯನವರು ಮಾಂತಗಿಯಲ್ಲಿ ಕಂಡ ಹೆಣ್ಣುತನವನ್ನು ತಮ್ಮ ಹೆಂಡತಿಯಲ್ಲಿ ಕಂಡಿರಲಿಲ್ಲವೆಂದು ಅವರಿಗೆ ತಿಳಿಯಿತು. ಇಲ್ಲಿಂದ ಹೋದ ಅವಳು ಗಂಡನ ಮನೆಯಲ್ಲಿ ಗಂಡು ಮಗನನ್ನು ಹೆತ್ತಳು. ಮಗುವಿಗೆ ೨ನೇ ವರ್ಷ ನಡೆಯುತ್ತಿದ್ದಾಗ ಮಗುವನ್ನು ಕರೆದುಕೊಂಡು ತನ್ನ ಹಳೆಯ ಗುಡಿಸಲಿಗೆ ಬಂದಳು. ಗುಡಿಯ ಪೂಜೆಗೆ ಹೋಗುವಾಗ, ಬಲಭಾಗದ ಗದ್ದೆಯಲ್ಲಿ ಮಾತಂಗಿ ಕಳೆಕೀಳುತ್ತಿರುವುದನ್ನು ಮೊದಲ ಸಲ ಕಂಡಾಗ ವೆಂಕಟರಮಣಯ್ಯನವರಿಗೆ ಮುಂದೆ ಹೆಜ್ಜೆ ಇಡುವುದೇ ಕಷ್ಟವಾಯಿತು. ಇವಳು ಎಲ್ಲಿಂದ ಬಂದಳು? ಯಾವಾಗ ಬಂದಳು? ನನಗೆ ಸುಳಿವು ಕೊಡುವುದು ಬ್ಯಾಡವೆ? ಎಂದು ಅವಳು ನನ್ನ ಕಡೆ ನೋಡಿಯಾಳೆಂದು ಐದು ನಿಮಿಷ ನಿಂತರು. ಇವನ ಸುಡುಗಾಡು ಸಂಬಂಧ ಬೇಡ ಅಂತ ಹೀಗೆ ಮಾಡ್ತಿದ್ದಾಳೋ? ಅವಳಿಗೆ ಬೇಡವಾದರೆ ನಾನ್ಯಾಕೆ ಧಾವಂತಪಡಬೇಕು. ವೆಂಕಟರಮಣಯ್ಯನವರು ಮಾತಂಗಿಯನ್ನು ತಬ್ಬಿ ಎಳೆದಾಗ ಅದ ಮಾಡಬ್ಯಾಡದು ಕಣ್ರಯ್ಯ ಎಂದಳು. ಅದಕ್ಕೆ ಇವರು ಗಂಡ ಹೆಂಡ್ತಿ ಹೆಂಗೆ ಬೇಕಾದ್ರೂ ಮಾಡ್ಕಳ್ಳಿ. ಈಗ ನೀನು ಬಾ ಎಂದಾಗ ಹಂಗಾರೆ ನಾನು ನಿಮ್ಮ ಸೂಳೆ ಏನ್ರಯ್ಯಾ? ಎಂದು ಕೇಳಿದಳು.

ವೆಂಕಟರಮಣಯ್ಯನಿಗೆ ದಿಕ್ಕು ತೋಚದಂತಾಯಿತು. "ಹಾದೀಲಿ ಬಿದೀಲಿ ಅಡ್ಡಾದ್ರೂ ಇನ್ಯಾವತ್ತು ಮಾತನಾಡಿಸಬೇಡಿ ಕಣ್ರಯ್ಯ. ನಿಮ್ಮ ಮರ್ವಾದಿ ಹೋಗಬಾರದು"[೪] ಎಂದು ಹೇಳಿ ತಿರುಗಿ ಹೊರಟು ಹೋದಳು. ಮಂಡ್ಯದ ಕೆಂಪಣ್ಣಗೌಡರು ಸಕ್ಕರೆ ಕಾರ್ಖಾನೆಯ ಆಡಳಿತ ಸಮಿತಿ ಸದಸ್ಯರು. ಇವರ ಮಗಳು ಕುಮುದಿನಿ ಇಂಟರ್ ಮೀಡಿಯಟ್ ಓದಿರುವ ಹೆಣ್ಣು. ಇವಳ ಜೊತೆಗೆ ಶ್ರೀನಿವಾಸನ ಮದುವೆ

ಅದ್ದೂರಿಯಾಗಿ ನಡೆಯಿತು. ಹೊಸದಾಗಿ ಮದುವೆಯಾದ ಕುಮುದಿನಿ ಶ್ರೀನಿವಾಸ ರಂಗಮ್ಮ ಮತ್ತು ತಿರುಮಲೇಗೌಡರು ಅಭಿಷೇಕ ಮಾಡಿಸುವುದಕ್ಕೆ ತಮ್ಮ ಮನೆದೇವರಾದ ತಿರುಮಲಸ್ವಾಮಿಗೆ ವಿಶೇಷ ಪೂಜೆಯನ್ನು ಸಲ್ಲಿಸಿದರು. ಮತ್ತು ಮಹಾಮಂಗಳಾರತಿಯನ್ನು ಮಾಡಿಸಿದರು. ವೆಂಕಟರಮಣಯ್ಯನವರು ಒಂದು ದಿನ ರಾತ್ರಿಯ ಸಮಯದಲ್ಲಿ ಮಾತಂಗಿಯನ್ನು ನೋಡುವುದಕ್ಕೆ ಅವರ ಕೇರಿಗೆ ಹೋಗಿದ್ದರು. ಅಲ್ಲಿ ಇದ್ದ ಜನರೆಲ್ಲರೂ ಹಾರುವಯ್ಯ ಕಣ್ಣೇ ಎಂದು ಪತ್ತೆ ಹಚ್ಚಿದರು. ಹುಚ್ಚುನಾಯಿ ಲಕ್ಷ್ಮೀಯನ್ನು ಕದಿಯಾಕೆ ಬಂದಿದೆ ಎಂದರು. ಅಷ್ಟರಲ್ಲಿ ಗಂಡಸರೆಲ್ಲರೂ ಹಸಿಯಾದ ಸಗಣಿ ತೊಪ್ಪೆಗಳನ್ನು ತೆಗೆದುಕೊಂಡು, ಹಾರುವಯ್ಯನ ತಲೆ, ಮುಖ, ಬೆನ್ನು, ಭುಜ ಕಾಲು, ಮೊಣಕಾಲುಗಳಿಗೆಲ್ಲ ಹೊಡೆದರು. ಬೇಗ ಬೇಗ ಹೆಜ್ಜೆ ಹಾಕಿ ಹಿಂತಿರುಗುತ್ತಾ ಬರುವಾಗ ನಾಯಿಗಳು ಓಡಿಸಿಕೊಂಡು ಬಂದವು. ಆದರೆ ಒಂದು ನಾಯಿ ಮೇಲೆ ಬಿದ್ದು ಇವರ ಮೊಣಕಾಲೀನ ಮೀನು ಖಂಡಕ್ಕೆ ಹಲ್ಲು ಹಾಕಿ ಬಿಟ್ಟಿತು. ಅಯ್ಯಯಪ್ಪಾ ಎಂದಾಗ ನಾಯಿಗಳಿಗೂ ಭಯವಾಗಿರಬೇಕು ಹಿಂತಿರುಗಿ ತೋಟದ ಗುಡಿಸಲಿಗೆ ಬಂದರು.

ಮಾತಂಗಿಯು ಗುಡಿಸಲಿಗೆ ಬಂದು ವೆಂಕಟರಮಣಯ್ಯನನ್ನು ಇಷ್ಟು ವರ್ಷದ ಮೇಲೆ ಮಾತಂಗಿ ಗ್ಯಾನ ಬಂತಾ? ಎಂದು ಕೇಳಿದಳು. ಮುಟ್ಟಾಗಿದ್ದ ಲಕ್ಷ್ಮಿಯು ಒಂದು ಸಲ ಹಾರುವರ ಕೇರಿಗೆ ಬಂದಳು. ವಿಶ್ರಮಿಸಿಕೊಳ್ಳಲು ಮೂರು ದಿನ ಜಾಗವನ್ನು ಕೇಳಿದಾಗ ಮೈಲಿಗೆಯಾಗುತ್ತದೆ ಎಂದು ಹೆದರಿದರು. ಮಡಿಯ ಬ್ರಾಹ್ಮಣರು ನಿರಾಕರಿಸಿದಾಗ, ಬೇಗ ತಮ್ಮ ಕೇರಿಯನ್ನು ಬಿಟ್ಟುಹೋಗು ಎಂದು ಗದ್ದರಿಸಿಕೊಂಡರು. ಅನಂತರ ಅವಳು ಕೊಮಟಿಗರ ಕೇರಿಗೆ ಹೋದಳು. ಅಲ್ಲಿ ಅವರು ಅವಳಿಗೆ ಜಾಗವನ್ನು ಕೊಟ್ಟು ಉಪಚರಿಸಿದರು. ಅವರ ಮೇಲೆ ಲಕ್ಷ್ಮಿಯು ಸಂಪ್ರಿತಳಾದಳು. ಆದ್ದರಿಂದಲೇ ಅವರು ಎಲ್ಲೆಲ್ಲೂ ವ್ಯಾಪಾರ ಮಾಡಿಕೊಂಡು ಶ್ರೀಮಂತರಾಗಿದ್ದಾರೆ. ಅಲ್ಲಿ ಸಹ ಒಂದು ದಿನವಿದ್ದು ಅವಳು ಹೊಲೆಯರ ಕೇರಿಗೆ ಹೋದಳು. ಆಜನರುಗಳು ಭಯ ಭಕ್ತಿಗಳಿಂದ ತಮ್ಮ ಒಂದು ಗುಡಿಸಲನ್ನು ಬಿಟ್ಟುಕೊಟ್ಟು ಉಪಚರಿಸಿದರು. ಅವರ ಮೇಲು ಲಕ್ಷ್ಮಿಯು ಪ್ರಸನ್ನಳಾದಳು. ಪಾಪಿ ಬ್ರಾಹ್ಮಣರೊಬ್ಬರಿಗೇ ಲಕ್ಷ್ಮಿಯು ಒಲಿಯಲಿಲ್ಲ. ಆದ್ದರಿಂದಲೇ ಹಾರುವವರು ಎಲ್ಲಿ ಹೋದರೂ ಬಡವರಾಗಿದ್ದಾರೆ. ಅಂತಹ ಪಾಪಿಗಳು ತಮ್ಮ ಹಟ್ಟಿಗೆ ಬಂದರೆ ಲಕ್ಷ್ಮಿಯು ಮುನಿಸಿಕೊಂಡು ಹೋಗುತ್ತಾಳೆ. ಆದ್ದರಿಂದ ಅವರಿಗೆ ಹಸಿ ಸಗಣಿಯಲ್ಲಿ ಹೊಡೆದು ಓಡಿಸಬೇಕೆಂಬ ಶಾಸ್ತ್ರ ಹೊಲೆಯರಲ್ಲಿದೆ. ಅದಕ್ಕೆ ಅವರು ಒಪ್ಪಿಕೊಳ್ಳುತ್ತಾರೆ.

ಮಾತಂಗಿಯ ಮುಖವು ಅಮಲಿನಿಂದ ಉಬ್ಬಿಕೊಂಡು ಜ್ವರಬಂದವಳಂತೆ, ಕಣ್ಣುಗಳು ಕೆಂಪಗೆ ತುಂಬಿಕೊಂಡಿತ್ತು. ಬಲಗಾಲಿಗೆ ನಾಯಿ ಕಡಿತಾ ಎಂದು ವೆಂಕಟರಮಣಯ್ಯನನ್ನು ಕೇಳಿದಳು. ಅವರು ಆ ಕಾಲನ್ನು ತೋರಿಸಿದರು. ಆದರೆ ಮಾತಂಗಿ ಆ ಕಾಲನ್ನು ತೆಗೆದುಕೊಂಡು ತನ್ನ ತೊಡೆಯ ಮೇಲಿಟ್ಟುಕೊಂಡು ನೋಡುತ್ತಾ "ಕಳ್‌ನನ್ ಹೆಂಡ್ತಿ ಮಗನ ನಾಯಿ ಹೇಗೆ ಕಚ್ಚಿದೆ!

ನೋಯ್ತದೇನ್ರಯ್ಯಾ?"[೫] ಎಂದು ಕೇಳಿದಳು. ಬೇಲಿಯ ಹತ್ತಿರ ಹೋಗಿ ಹುಡುಕಿಕೊಂಡು ಎಳೆ ಚದುರಂಗದ ಸೊಪ್ಪನ್ನು ತಂದು ಅದನ್ನು ಅಂಗೈಗೆ ಹಾಕಿಕೊಂಡು ಬಲಗೈಯಿಂದ ತಿಕ್ಕಿ ತಿಕ್ಕಿ ರಸವನ್ನು ಹೊರಡಿಸಿ ಕೈಯನ್ನು ಗಾಯದ ಮೇಲೆ ತಂದು ಬಲವಾಗಿ ಹಿಂಡಿದಳು. ಅವರು ಉರಿಹತ್ತಿದ್ದಾಗ ಬೇಗ ಮಾಯುತದೆ. ನಾಯಿಯ ಹಲ್ಲು ವಿಷ ಎಂದು ಹೇಳಿದಳು. ಕೈಯಲ್ಲಿ ಹೊಸಗಿದ ಸೊಪ್ಪನ್ನು ಗಾಯಕ್ಕೆ ಮೆತ್ತಿ ತನ್ನ ಸೀರೆಯ ಸೆರಗನ್ನು ಹಲ್ಲಿನಿಂದ ಕಚ್ಚಿ ಹರಿದು ಕಟ್ಟಿದಳು. ಮಾತಂಗಿ ವಾಪಸ್ಸು ಹೋಗಲು ಹೊರಟಾಗ ವೆಂಕಟರಮಣಯ್ಯ ತಮ್ಮ ಜೊತೆಯಲ್ಲೆ ಇರುವಂತೆ ಅವಳನ್ನು ಒತ್ತಾಯ ಮಾಡಿದರು ಆದರೆ ಮಾತಂಗಿ ಒಪ್ಪಲಿಲ್ಲ ಗಾಂಧೀ ಆಶ್ರಮದಿಂದ ಬಂದ ಬೆಟ್ಟಯ್ಯ ತಮ್ಮ ಜನ ಇಂಥ ಕೆಲಸಗಳಲ್ಲೆಲ್ಲ ತೊಡಗಬಾರದೆಂದು ತಮಗೆಲ್ಲ ಬುದ್ದಿ ಹೇಳಿರುವುದಾಗಿ ತಿಳಿಸಿದಳು. ವೆಂಕಟರಮಣಯ್ಯ ಅವಳನ್ನು ಬಿಟ್ಟಿರಲಾರದೆ ಅವಳ ಸೆರಗು ಹಿಡಿದು ಎಳೆಯುತ್ತ ಒತ್ತಾಯ ಮಾಡಿದರು. "ಗುಡಿಸಿಲಲ್ಲೆ ಇರು ನಾನು ನಿನ್ನನ್ನು ಬ್ರಾಹ್ಮಣಿ ಮಾಡುತ್ತೇನೆ"[೬] ಎಂದರು. ಮಾತಂಗಿ ಗೊಳ್ಳೆಂದು ನಕ್ಕಳು.

ಮಾತಂಗಿಯು ಅಡುಗೆ ಮಾಡುತ್ತಿನಿ ಊಟ ಮಾಡುತ್ತೀರ ಎಂದು ಕೇಳಿದಳು. ಆದರೆ ಅವಳು ಮಾಡಿ ಇಕ್ಕಿದುದ್ದನ್ನು ತಾವು ತಿನ್ನಬಹುದೋ ಬಾರದೋ! ಎಂಬ ಪ್ರಶ್ನೆ ತಲೆಯಲ್ಲಿ ಹುಟ್ಟಿ ಯೋಚಿಸುತ್ತಾ ಕೂತರು. ಆಗ ಅವಳೇ "ನಮತಾವ ಮನೀಕತ್ತೀರ, ನಾವು ಮಾಡಿದ್ದು ಯಾಕ್ ಉಣ್ಣಕ್ಕಿಲ್ರಯ್ಯಾ?"[೭] ಎಂದು ಹೇಳಿದಳು. ಈ ಮಾತನ್ನು ಕೇಳಿ ವೆಂಕಟರಮಣಯ್ಯನವರು ಬೆಚ್ಚಿದರು. ಕಾಮ ತೃಪ್ತಿಗೆ ಯಾರಾದರೂ ಯಾವ ಹೆಂಗಸನ್ನಾದರೂ ಭೋಗಿಸಬಹುದು. ಆದರೆ ಭೋಜನ, ಸಂಸ್ಕಾರ, ಸಹಭಾಗಿತ್ವಕ್ಕೆ ಕುಲ ಪ್ರಸೂತೆಯೇ ಬೇಕಾಗುತ್ತದೆ. "ಮಾದಿಗಿತ್ತೀನ ಹಾರವಗಿತ್ತಿ ಮಾಡಾಕೆ ಆಯ್ತದೇನಯ್ಯ! ನನ್ನ ಸೀರೆ ಸೆರಗು ಬಿಡಿ ಹೊರಟುಹೋಯ್ತೀನಿ. ಇನ್ನು ಮ್ಯಾಗೆ ಹಿಂಗ್ ಮಾಯಾ ಮಂತ್ರಮಾಡಿ ಕರಕಂಡು ಬರಬ್ಯಾಡಿ, ನಿಮ್ಮ ಮರ್ವಾದೇನೆ ಹೋಯ್ತುದೆ"[೮] ಎಂದು ಹೇಳಿ ತಿರುಗಿ ನೋಡದೆ ಹೊರಟು ಹೋದಳು. ಮಾತಂಗಿಯನ್ನು ಆರುಂಧತಿ, ಹುಟ್ಟಿನಿಂದ ಚಾಂಡಾಲ ಕನ್ಯೆ, ಆದರೆ ನನ್ನ ಕೈ ಹಿಡಿದ ಮೇಲೆ ಮಹಾಬ್ರಾಹ್ಮಣಿಯಾದಳು ಎಂದಿದ್ದುದು ನೆನಪಾಯಿತು. ಹಿಂದಿನ ರಾತ್ರಿ ಅತ್ತಿಗೆ ಜಯಮ್ಮ ಹೇಳಿದ್ದ ಘಟನೆ ನೆನಪಿಗೆ ಬಂದು. ಅವರ ಕಾಲಿನ ಕಡೆ ನೋಡಿದಾಗ ಬಲಗಾಲಿನ ಮೇಲೆ ಆಗಿದ್ದ ದೊಡ್ಡ ಗಾಯ ಕಾಣಿಸಿತು. "ಅಪ್ಪಾ ಅದೇನು ಗಾಯ? ನಾಯಿ ಕಡಿದಿತ್ತೆ"[೯] ಎಂದು ಕೇಳಿದೊಡನೆ ವೆಂಕಟರಮಣಯ್ಯನವರಿಗೆ ಪ್ರಚಂಡ ಕೋಪ ಬಂತು.

ವೆಂಕಟರಮಣಯ್ಯನವರು ಸತ್ಯಭಾಮಳನ್ನು "ಹೊರಟು ಹೋಗು ಈ ಆಶ್ರಮದಿಂದ ಶ್ವಾನ ಮುಂಡೇದ! ನಾಯಿಯ ಮಾತಾಡ್ತೀಯಾ, ಈ ಬ್ರಹ್ಮರ್ಷಿಯನ್ನು ನಾಯಿ ಮುಟ್ಟುತ್ತದೆಯೆ? ಈ ಮಾತಾಡಿದರೆ ನಿನ್ನ ತಲೆ ಮೇಲೆ ಮೈಕೈಗಳ ಮೇಲೆ ಸಗಣಿಯಿಂದ ಹೊಡೀತೀನಿ"[೧೦] ಎಂದು

ಗರ್ಜಿಸಿದರು. ಸತ್ಯಾಭಾಮೆ ಹೇಗೋ ಅವರನ್ನು ಸಮಾಧಾನಕ್ಕೆ ತಂದಮೇಲೆ ಅವರೇ ಹೇಳಿದರು. ನಾಯಿ ಅಂದರೆ ಚಂಡಾಲ ಜಾತಿ, ನನ್ನ ಹತ್ತಿರಕ್ಕೆ ಬರಲು ಚಂಡಾಲರಿಗೆ ಧೈರ್ಯವಿಲ್ಲ.

"ಹಾಗಾದರೆ ಅರುಂಧತಿ?"

"ಅವಳನ್ನು ನಾನು ಶುದ್ಧ ಮಾಡಿದೆ."

"ಶುದ್ಧ ಮಾಡಿದರೂ ಯಾಕೆ ಎಲ್ಲಿಗೋ ಹೋದಳು?"

"ಮೈಲಿಗೆಯ ಭಯ ಅವಳ ಒಳಗೇ ಇರಬೇಕು? ಈ ಅಗ್ನಿಗೆ ಹೆದರಿ ಅವಳು ಹೋಗಿರಬಹುದು"[೧೧] ಇಷ್ಟು ಹೇಳಿ ವೆಂಕಟರಮಣಯ್ಯ ಮಗಳನ್ನು ಕರೆದುಕೊಂಡು ಬಂದು ಬೇಲಿಯಾಚೆಯ ಕಾಲುವೆಯನ್ನು ತೋರಿಸಿ. ಅಲ್ಲಿ ನೋಡು, ಆ ಮಹಾ ಸಮುದ್ರದ ಆಚೆಗೆ ಇರುವುದು ರಾಕ್ಷಸಲೋಕ, ನೀನು ಈ ಬೇಲಿಯನ್ನು ದಾಟಿ ಹೋಗಕೂಡದು ಎಂದು ಆಜ್ಞಾಪಿಸಿದರು. ಮನೆಯೊಳಗೆ ಒಂದಷ್ಟು ಹೊತ್ತು ಏನೋ ಕೆಲಸ ಮಾಡುತ್ತಿದ್ದು, ಸತ್ಯಭಾಮೆ ದೇವಸ್ಥಾನದ ಕಡೆ ಹೋಗುವ ಹೊತ್ತಿಗೆ, ವೆಂಕಟರಮಣಯ್ಯ ಗುಡಿಯ ಹತ್ತಿರ ದಿಬ್ಬದ ಮೇಲೆ ಹೋಗಿ ನಿಂತಿದ್ದರು. ಅದೇ ವೇಳೆಗೆ ಸರಿಯಾಗಿ ವೃದ್ಧ ಪಟೇಲ ತಿರುಮಲೇಗೌಡರು, ಅವರ ಸೊಸೆ ರಂಗಮ್ಮ ಶ್ರೀನಿವಾಸ ಮತ್ತು ಅವನ ಸುಮಾರು ಆರು ತಿಂಗಳ ಬಸರಿ ಹೆಂಡತಿ ಕುಮುದಿನಿ ಗುಡಿಗೆ ಪೂಜೆ ಮಾಡಿಸಲು ಬರುತ್ತಿದ್ದರು. ವೆಂಕಟರಮಣಯ್ಯ ಇವರನ್ನು ನೋಡಿದ್ದೇ ತಡ ಕೈಲಿ ಪೂಜಾದ್ರವ್ಯಗಳನ್ನು ಹಿಡಿದು ನಿಧಾನವಾಗಿ ನಡೆಯುತ್ತಿದ್ದ ಬಸರಿ ಹೆಂಗಸಿನ ಕೈ ತೋರಿಸಿ ಕಿರುಚಿದರು. "ಈ ಗರ್ಭ ಉಳಿಯಲ್ಲ. ಈ ಬೀಜ ಮೊಳೆಯಲ್ಲ. ಈ ತಳಿ ಬೆಳೆಯುಲ್ಲ"[೧೨] ಇದೇ ಮಾತನ್ನು ಮಂತ್ರಹೇಳಿದಂತೆ ಮತ್ತೆ ಮತ್ತೆ ಗಟ್ಟಿಯಾಗಿ ಒದರುತ್ತಿದ್ದರು. ಎಲ್ಲರೂ ಸಹ ಸ್ತಂಭೀಭೂತರಾದರು.

ತಿರುಮಲೇಗೌಡರು ಕೈಲಿದ್ದ ಬೆತ್ತವನ್ನು ಮೇಲೆತ್ತಿ "ಕೆಟ್ಟ ಮಾತಾಡ್ತೀಯ ಹುಚ್ಚುನಾಯಿ! ಗುಡಿತಾವಿಂದ ಹೋಯ್ತೀಯೋ, ನಿಂಗೆ ಕಾಲು ಮುರಿಗಂಟ ಮಡುಗಬೇಕೋ"[೧೩] ಎಂದು ಗದರಿದರು. ಅಷ್ಟರಲ್ಲಿ ಸತ್ಯಭಾಮೆ ಅವರ ಹತ್ತಿರ ಹೋಗಿ ಅವರ ಕೈಹಿಡಿದು "ಅಪ್ಪ ಇಂತಹ ಮಾತು ನಿನ್ನ ಬಾಯಿಂದ ಬರಬಾರದು. ಆಶ್ರಮಕ್ಕೆ ಹೋಗೋಣ ಬಾ"[೧೪] ಎನ್ನುತ್ತಾ ಅವರನ್ನು ತೋಟದ ಗುಡಿಸಲಿಗೆ ಕರೆದುಕೊಂಡು ಹೋದಳು. ಆಗಲೂ ಅವರು "ಈ ಗರ್ಭ ಉಳಿಯೋಲ್ಲ"[೧೫] ಎಂಬ ಮಂತ್ರ ಜಪಿಸುತ್ತಲೇ ಇದ್ದರು. ಸತ್ಯಭಾಮೆ ತೋಟಕ್ಕೆ ಬಂದಾಗ ಅವಳ ಅಪ್ಪ ಕೊಳದ ದಡದಲ್ಲಿ ಕುಳಿತು ಮಂತ್ರ ಹೇಳಿಕೊಳ್ಳುತ್ತಿದ್ದರು. ಸತ್ಯಭಾಮೆ ಗುಡಿಸಿಲೊಳಗೆ ಹೋಗಿ, ಅಲ್ಲಿ ಗೂಟಕ್ಕೆ ನೇತು ಹಾಕಿದ್ದ ಕೈಚೀಲವನ್ನು ತೆಗೆದು ನೋಡುತ್ತಿರುವಾಗ ಅದರೊಳಗೆ ಜನಿವಾರದ ಕಟ್ಟು, ಊದು ಕಡ್ಡಿಯ ಪೊಟ್ಟಣಗಳ ಜೊತೆಗೆ ಹೊಸದಾಗಿ ಬ್ಯಾಂಕಿನಿಂದ ತಂದು ಇಟ್ಟಿದ್ದ ಎರಡು ಸಾವಿರ ರೂಪಾಯಿಗಳಿದ್ದುದನ್ನು ಕಂಡು

ಆಶ್ಚರ್ಯವಾಯಿತು. ಅಷ್ಟರಲ್ಲಿ ಒಳಗೆ ಬಂದ ವೆಂಕಟರಮಣಯ್ಯ "ಅದು, ಇಂದ್ರನ ಜೊತೆಯಲ್ಲಿ ಯಜ್ಞಕ್ಕಾಗಿ ಭೂಲೋಕಕ್ಕೆ ಹೋಗಿದ್ದಾಗ, ವಶಿಷ್ಠ ಪತ್ನಿಗೆ ಸಲ್ಲಬೇಕಾದ ಕಾಣಿಕೆಯೆಂದು ಅರ್ಪಿಸಿದ ಹಣ, ಅದನ್ನೂ ಯಾರು ಮುಟ್ಟಕೂಡದು"[೧೬] ಎಂದು ಆಜ್ಞಾಪಿಸಿದರು. ಸತ್ಯಭಾಮೆಗೆ ಪುನಃ ಹಣವನ್ನು ಅಲ್ಲಿಯೇ ಇಟ್ಟಿದ್ದಳು.

ಮಾರನೆಯ ದಿನ ಸತ್ಯ ತೋಟದ ಕಡೆಗೆ ಬರುತ್ತಿರುವಾಗ ಅವಳ ದೃಷ್ಟಿ ಎಡಭಾಗದ ದೇವಸ್ಥಾನದ ದಿಬ್ಬದ ಕಡೆಗೆ ಹೋಯಿತು. ಅಲ್ಲಿ ವೆಂಕಟರಮಣಯ್ಯ ಕೇವಲ ಕೌಪೀನ ಧಾರಿಗಳಾಗಿ, ಹೆಗಲಮೇಲೆ ಸೆಣಬಿನ ಹೊರಜಿಯಂತೆ ಕಾಣುವ ಜನಿವಾರ ಸಹಿತವಾಗಿ ನಿಂತಿದ್ದರು. ಅವರ ಸುತ್ತ ಹತ್ತು ಹನ್ನೆರಡು ಜನ ಗುಂಪು ಗೂಡಿ ಗಟ್ಟಿಯಾಗಿ ಮಾತಾಡುತ್ತಿದ್ದರು. ಬೆಟ್ಟಯ್ಯನವರ ಮಗ ಮೋಹನದಾಸ ದೇವಸ್ಥಾನದ ದಿಬ್ಬದ ಮೇಲೆ ಜನರ ಮಧ್ಯದಲ್ಲಿ ನಿಂತು ವೆಂಕಟರಮಣಯ್ಯನವರನ್ನು ಎದುರಿಗೆ ನಿಲ್ಲಿಸಿ ಮನಸ್ಸಿಗೆ ಬಂದಂತೆ ಬಯ್ಯುತ್ತಿದ್ದ. ನ್ಯಾಯವನ್ನು ಕೇಳುತ್ತೇನೆ. ತುಂಬಿದ ಸಭೇಲಿ ತಾಳಿ ಕಟ್ಟುವ ತನಕ ಬಿಡುವುದಿಲ್ಲ. "ಮೇಲು ಜಾತಿಯವರೆಲ್ಲ ಸೇರಿ ನಮ್ಮ ಜಾತಿ ಹೆಂಗಸರನ್ನು ಹಾದರಗಿತ್ತಿಯರಾಗಿ ಮಾಡುತ್ತಿದ್ದಾರೆ. ಲೇ ಹಾರುವಯ್ಯ ಅದ್ಯಾರು ಅಂತ ಪತ್ತೆಯಾಗಲಿ ನಿನ್ನ ಮೇಲೆ ಕೇಸು ಹಾಕಿಸಿ ಜೀವನಾಂಶ ಮಸೂಲಿ ಮಾಡಿಸ್ತೀನಿ. ನಮ್ಮ ಜನಾಂದ್ರೆ ಏನೂಂತ ತಿಳ್ಕಂಡೆ?"[೧೭] ಎಂದು ಜಗಳ ಕಾಯುವವನಂತೆ ಗಲಾಟೆ ಮಾಡುತ್ತಿದ್ದ, ಆದ್ದರಿಂದಲೇ ಇವರು ತನ್ನ ಮರ್ಯಾದೆಯನ್ನು ಕಾಪಾಡಿಕೊಳ್ಳುವುದಕ್ಕೋಸ್ಕರ, ಜನಿವಾರಕ್ಕೆ ಕಲ್ಲನ್ನು ಕಟ್ಟಿಕೊಂಡು ಕೆರೆಗೆ ಬಿದ್ದವ್ರೆ ಎಂದು ಹೇಳಿದರು. ಅಥವಾ ಅವನೇ ಹಿಡಿದುಕೊಂಡು ಹೊಟ್ಟೆಗೆ ಕಲ್ಲುಕಟ್ಟಿ ಕೆರೆಗೆ ಮುಳುಗಿಸಿರಬಹುದು ಎಂದರು. ಮೋಹನದಾಸನ ಮೇಲೆ ಕೇಸು ಹಾಕಿದರೂ ಸತ್ಯಭಾಮಳು ಹೋಗಿ ವಾಪಸ್ಸು ತೆಗೆದುಕೊಂಡಳು. ಮಾತಂಗಿಯನ್ನು ಬೆಟ್ಟಯ್ಯನವರ ಮೂಲಕ ತನ್ನ ಗುಡಿಸಲಿಗೆ ಕರೆದುಕೊಂಡು ಬಂದರು. ಮಾತಂಗಿ ಬೇಡ ಬೇಡವೆನ್ನುತ್ತಿದ್ದರೂ ವೆಂಕಟರಮಣಯ್ಯನವರು ಇಟ್ಟಿದ್ದ ಎರಡು ಸಾವಿರ ರೂಪಾಯಿಗಳನ್ನು ಮಾತಂಗಿಗೆ ಕೊಟ್ಟು, ಊಟವನ್ನು ಮಾಡಿ ಕಳುಹಿಸಿಕೊಟ್ಟರು.

ಪೂಜಾರಿ ವೆಂಕಟರಮಣಯ್ಯನವರಿಗೆ ಹುಚ್ಚು ಹಿಡಿದಿದ್ದ ಸಂದರ್ಭದಲ್ಲಿ ಹೇಳಿದ ಮಾತು ತನಗೆ ತಗುಲದಿರಲಿ ಎಂದು ಕುಮುದಿನಿಯು ದೇವರನ್ನು ಪ್ರಾರ್ಥಿಸಿಕೊಂಡಳು. ಶ್ರೀನಿವಾಸನು ದೇವರನ್ನೂ ನೋಡಿದ ತಕ್ಷಣ ಭಯವಾಯಿತು. ಯಾವ ಕಾರಣಕ್ಕೆ ಎಂಬುದು ಸಹ ತಿಳಿಯಲಿಲ್ಲ. ಪ್ರಸಾದವನ್ನು ತೆಗೆದುಕೊಂಡು ಎಲ್ಲರೂ ಮನೆಗೆ ಬಂದರು ಕುಮುದಿನಿಯು ಅಡಿಗೆ ಮನೆಯಲ್ಲಿಯೇ ಇದ್ದ ನಿಂಗಮ್ಮನ ಹತ್ತಿರ ಮಾತನಾಡುತ್ತಿದ್ದಳು. ದೇವಸ್ಥಾನದ ಹತ್ತಿರ ನಡೆದ ಘಟನೆಯನ್ನು ತಿಳಿಸಿ ಕೇಳಿದಳು. ನನಗೆ ಶಾಪಹಾಕಬೇಕಾದರೆ ಅವರಿಗೆ ಏನು ದ್ವೇಷವಿತ್ತು? ಎಂದು ಕೇಳಿದಳು. ನಿಂಗಮ್ಮ ಅವರ ಮಗಳನ್ನು

ಮದುವೆಯಾಗಲಿಲ್ಲ ಎಂಬ ಕೋಪ ಇರಬಹುದು ಎಂದು ತಕ್ಷಣ ಮಾತನ್ನು ಅರ್ಧಕ್ಕೆ ನಿಲ್ಲಿಸಿದಳು. ಕುಮುದಿನಿಗೆ ಅನುಮಾನವಾಯಿತು. ಆದರೂ ಬಲವಂತ ಮಾಡಿಕೈಹಿಡಿದು ಕೇಳುತ್ತಾ "ಅತ್ತೆ ನಿಮ್ಮಾಣೆ ನಾನು ಯಾರ ಕೈಯಲ್ಲಿ ಹೇಳುವುದಿಲ್ಲ ನಿಜವನ್ನು ಹೇಳಿ"[೧೮] ಎಂದಳು. ಲಕ್ಷಣವಾಗಿರುವ ಬ್ರಾಹ್ಮಣ ಹುಡುಗಿಯಂತೆ ಮಾತನಾಡುವ ಬಿಳೀ ಸಕ್ಕರೆ ಕಂಪನಿಯ ಮನೆಯ ಮಗಳು ಕೈಹಿಡಿದು ಕೇಳಿದ್ದರಿಂದ ನಿಂಗಮ್ಮನ ಮನಸೋತು ಶ್ರೀನಿವಾಸ ಮತ್ತು ಸತ್ಯಭಾಮಳ ವಿಷಯವಾಗಿ ಎಲ್ಲಾ ವಿಚಾರವನ್ನು ಹೇಳಿದಳು. ಕುಮುದಿನಿಯು ಎಷ್ಟೇ ಸಮಾಧಾನವಾಗಿರಬೇಕೆಂದು ಬಹಳ ಪ್ರಯತ್ನಿಸಿದ್ದರೂ ಕೇಳುವಾಗ ಇವಳಿಗೆ ಕಣ್ಣೀರು ಬರುತ್ತಿತ್ತು. ಆದರೆ ಈಕೆಯ ಎದುರಿಗೆ ಅಳಬಾರದೆಂದು ತಡೆದುಕೊಂಡಳು. ಸ್ವಲ್ಪ ಹೇಳಿ ಮುಗಿಸಬೇಕೆಂದು ತಿಳಿದಿದ್ದ ನಿಂಗಮ್ಮ ಹೇಳುತ್ತಾ ತನಗೆ ತಿಳಿದುದ್ದನ್ನೆಲ್ಲ ಹೇಳಿಬಿಟ್ಟಳು.

ಸತ್ಯಭಾಮಳ ಮೇಲೆ ಪ್ರೀತಿ ಇದ್ದಾಗ ಶ್ರೀನಿವಾಸ ಅವಳನ್ನೇ ಮದುವೆ ಮಾಡ್ಕಳ್ಳಿಲ್ಲ? ಎಂದು ಕೇಳಿದಳು. ಆದರೆ ಅದಕ್ಕೆ ಶ್ರೀನಿವಾಸ ಒಪ್ಪಿಕೊಂಡಿದ್ದನು ಆದರೂ ಇವರಿಗೆ ಒಪ್ಪಿಗೆಯಿರಲಿಲ್ಲ ಎಂದರು. ಹಳೆಯ ಪ್ರಿಯತಮೆಯನ್ನು ನೆನಸಿಕೊಂಡು ಹೀಗಾಗಿದ್ದಾರೆಂದು ಅವಳಿಗೆ ತಿಳಿಯಿತು. ಇವರು ತನ್ನ ಹತ್ತಿರವಿದ್ದರೂ ಸಹ ಸಂಶಯ ಮಾತ್ರ ಹೋಗಿರಲಿಲ್ಲ. ಕುಮುದಿನಿಯು ತನ್ನ ಪ್ರೀತಿ ಪ್ರೇಮವನ್ನು ಗಂಡನಿಗೆ ಧಾರೆ ಎರೆದಿದ್ದಳು. ಆದರೆ ಕಥೆ, ಕಾದಂಬರಿಗಳನ್ನು ಓದಿ ಅರ್ಥಮಾಡಿಕೊಂಡಿದ್ದ, ಸಿನಿಮಾಗಳಲ್ಲಿ ನೋಡಿದ್ದ ನಾಯಕರ ಪ್ರೇಮವು ತನ್ನ ಗಂಡನಲ್ಲಿದೆ ಎಂದು ತಿಳಿದಿದ್ದಳು. ಎಂಟು ದಿನ ಊರ ಬಿಟ್ಟು ಹೋದರೆ ಒಬ್ಬನೆ ಇರಲಾರದೆ ಬೀರನ್ನು ಕುಡಿದನು. ಗಂಡನ ಮೇಲೆ ಪ್ರೀತಿಯು ಇಮ್ಮಡಿಗೊಂಡಿತ್ತು. ಕುಮುದಿನಿಗೆ ಇದುವರೆಗೂ ಪರಮನಾಯಕನಾಗಿದ್ದನು. ಆದರೆ ಈಗ ಅವನು ಅವಳ ಮಟ್ಟಿಗೆ ಮೋಸ ಮಾಡಿದ ಖಳನಾಯಕನಂತೆ ಕಾಣುತ್ತಿದ್ದಾನೆ. ಹೂವೀಳ್ಯ ಶಾಸ್ತ್ರದ ದಿನ ಇಬ್ಬರು ಕುಳಿತುಕೊಂಡು ಅರ್ಧ ಗಂಟೆ ಮಾತನಾಡಿದರು. ಮದುವೆಯ ಹೊಸದರಲ್ಲಿ ಅದ್ದೂರಿಯಾಗಿ ಶೃಂಗಾರವಾದ ಕೋಣೆಯನ್ನು ಅಲಂಕಾರಗೊಳಿಸಿದ್ದಾರೆ.

ಶ್ರೀನಿವಾಸ ಕುಮುದಿಯ ಕೈಯನ್ನು ಹಿಡಿದುಕೊಂಡು ನನ್ನನ್ನು ಪ್ರೀತಿಸುತ್ತಿಯಾ? ಎಂದು ಕೇಳಿದನು. ಆದರೆ ತಮ್ಮ ಅಖಂಡ ಪ್ರೇಮವನ್ನು ತನಗೆ ಅರ್ಪಿಸಿರುವುದಾಗಿ ಸ್ಪಷ್ಟವಾಗಿ ಏಕೆ ಹೇಳಿರಲಿಲ್ಲ! ಆದರೆ ಎಲ್ಲವೂ ವಂಚನೆ, ಮೋಸ ಯಾರನ್ನೂ ನಂಬಬಾರದು. ಪ್ರೀತಿ ಪ್ರೇಮದಲ್ಲಿ ನಿರಾಶಿತಳಾದ ನಾನು ಪ್ರಾಣ ಕಳೆದುಕೊಳ್ಳಬೇಕು. ಸತ್ತ ಮೇಲೆ ಪ್ರೀತಿಯ ಬೆಲೆ ಗೊತ್ತಾಗುವುದು ಎಂದು ಗಂಡನ ಹತ್ತಿರ ಮಾತನಾಡಬಾರದೆಂದು ಕುಮುದಿನಿಯು ನಿರ್ಧರಿಸಿದಳು. ಇವಳು ಮಲಗಿದ್ದ ಕೋಣೆಗೆ ಶ್ರೀನಿವಾಸ ಬಂದಾಗ ಕೋಪಬಂದಿತು. ಅವಳು ತೋಳನ್ನು ಹಿಡಿದು ಕೇಳುತ್ತಾ ನನಗ್ಯಾಕೆ ಅನ್ಯಾಯ ಮಾಡಿದಿರಿ? ಚಂಡಾಲರು ನೀವು ಎಂದಳು. ಇವಳ ಮಾತು ಸರಿಯಾಗಿ ತಿಳಿಯದಿದ್ದಾಗ ನಾನೇನು ಮಾಡಿದೆ? ಎಂದು

ಹೇಳಿದನು. ನೆನ್ನೆಯಿಂದ ಯಾವಳನ್ನು ಕುರಿತು ಚಿಂತನೆ ಮಾಡುತ್ತಿದ್ದೀರ ತಕ್ಷಣ ಹೇಳಿ ಗೊತ್ತಾಗುತ್ತೆ ಎಂದಳು. ಆಗ ಅವನಿಗೆ ದಿಕ್ಕು ತೋಚದೆ ಸುಮ್ಮನಾದನು. ಅವನ ತೋಳನ್ನು ಅತ್ತ ನೂಕಿ ಮಂಚದ ಕಟ್ಟಿಗೆ ತಲೆಕೊಟ್ಟು ಅವಳು ಬಿಕ್ಕಿ ಬಿಕ್ಕಿ ಅಳಲು ಪ್ರಾರಂಭಿಸಿದಳು. ಅವಳ ಹತ್ತಿರ ಹೋಗಿ ಸಮಾಧಾನವನ್ನು ಮಾಡಲಿಲ್ಲ. ಮಂಡ್ಯದ ತವರುಮನೆಗೆ ಕರೆ ಮಾಡಿ ತಂದೆಯವರು ಅವಳ ಜೊತೆ ಮಾತನಾಡಿದರು. ನಿಮ್ಮನ್ನ ನೋಡಬೇಕು ಅನ್ನಿಸಿದೆ ಎಂದಳು. ಆಗ ಅವರಿಗೆ ಚೊಚ್ಚಲು ಬಸುರಿಯನ್ನು ಆರನೆಯ ತಿಂಗಳಾದರೂ ಕರೆದುಕೊಂಡು ಬರಲಿಲ್ಲ ಎಂದು ಅವರಿಗೆ ನೆನಪಾಯಿತು. ಅವರ ಪತ್ನಿಯರು ನಾಲ್ಕು ಸಲ ನೆನಪಿಸಿದರು. ಇವತ್ತೇ ಬರ್ತೀನಿ ಅಮ್ಮಯ್ಯ ಎಂದು ಹೇಳಿದರು.

ಕೆಂಪಣ್ಣನವರು ಆಫೀಸಿಗೆ ಹೋಗಿ ಮೇಲಗಿರಿಗೌಡರನ್ನು ಮಾತನಾಡಿಸಿಕೊಂಡು ಬಂದರು. ಬೀಗಿತ್ತಿ ಮತ್ತು ಅಳಿಯನಿಗೆ ಮಗಳನ್ನು ಕರೆದುಕೊಂಡು ಹೋಗುತ್ತೇನೆ. ನೀವೂ ಬನ್ನೀರಿ ಎಂದು ಹೇಳಿ ಹೊರಟು ಹೋದರು. ಕುಮುದಿನಿ ತವರು ಮನೆಗೆ ಹೋದಾಗ ತನ್ನ ತಪ್ಪಿನ ಅರಿವು ಶ್ರೀನಿವಾಸನಿಗೆ ಆಗಿದೆ. ವೆಂಕಟರಮಣಯ್ಯನವರ ಹಾಗೆಯೇ ನನಗೂ ಸಹ ಹುಚ್ಚನಾಗಬೇಕು ಎಂಬ ಆಸೆಯಾಗುತ್ತದೆ. ಮಾವನವರಿಗೆ ಶ್ರೀನಿವಾಸನ ಎಲ್ಲಾ ವಿಚಾರವು ಗೊತ್ತಾಗಿದೆ. ಆದರೆ ಕಟ್ಟಿಕೊಂಡ ಹೆಂಡತಿಯನ್ನು ಸಮಾಧಾನ ಮಾಡಬ್ಯಾಡ್ದ? ಎಂದರು. ಆದರೂ ಸಹ ತನ್ನ ಮಗನ ಬುದ್ಧಿಯನ್ನು ಒಪ್ಪಲಿಲ್ಲ. ಆದರೆ ಮನಸ್ಸನ್ನು ತಡೆಯಲಾರದೆ ಕುಮುದಿನಿಯ ಹತ್ತಿರ ಬಂದನು. ಅವಳು ಮಲಗಿದ್ದ ಮಂಚದ ಬದಿಗೆ ಕುಳಿತುಕೊಂಡು, ಏಕೆ ಕೋಪ? ಎಂದು ತೋಳಿನ ಮೇಲೆ ಕೈ ನೀಡಿದನು. ಅವಳು ತನ್ನ ತೋಳನ್ನು ತೆಗೆದುಕೊಂಡಳು. ಕುಮುದಿನಿಯು ಅಳುತ್ತಾ ಬಿಕ್ಕುತ್ತಾ ಹೇಳಿದಳು. "ಆ ಮುದುಕನ ಮಾತು ನಿಜವಾಗುತ್ತೆ, ಈ ಹೆರಿಗೇಲಿ ನಾನು ಉಳಿಯಲ್ಲ, ನನ್ನ ಮಗುವು ಉಳಿಯೋಲ್ಲ"[೧೯] ಎಂದು ಮತ್ತೆ ಮತ್ತೆ ಅದನ್ನೆ ಹೇಳುತ್ತಿದ್ದಳು. ಶ್ರೀನಿವಾಸನು ಕೆಟ್ಟಮಾತನ್ನು ಆಡಬಾರದು ಎಂದು ಹೆಂಡತಿಗೆ ಹೇಳಿದನು. ಸತ್ತರೆ ಅವಳನ್ನು ಸುಖವಾಗಿ ಮದುವೆಯಾಗಬಹುದು ಅಂತಲ್ಲವೆ? ಎಂದಾಗ ನಿನ್ನಾಣೆಗೂ ಇಲ್ಲ ಎಂದನು. ಬೇರೆ ಜಾತಿಯವರನ್ನು ಏಕೆ ಪ್ರೀತಿಸಿದಿರಿ? ಎಂದು ಕೇಳಿದಳೂ ಮೂಕನಂತೆ ಕೂತಿದ್ದನು. ಸ್ವ ಇಚ್ಛೆಯಿಂದ ನನ್ನನ್ನು ನೋಡುವುದಕ್ಕೆ ಬಂದಿಲ್ಲ ಎಂದಳು. ಕುಮುದಿನಿಯು ಕಠಿಣವಾಗಿ ಮಾತನಾಡುತ್ತಾಳೆಂದು ಅವನಿಗೆ ಕಲ್ಪನೆಯೇ ಇರಲಿಲ್ಲ. ಶ್ರೀನಿವಾಸನಿಗೆ ಅಪಮಾನವಾಗಿ ಅತ್ತೆ ಮತ್ತು ಹೆಂಡ್ತಿಯ ಎದುರಿಗೆ ಮುಖವನ್ನು ತೋರಿಸಲು ಸಂಕೋಚವಾಯಿತು. ಇದ್ದಕ್ಕಿದ್ದ ಹಾಗೆಯೇ ಕೋಪ ಬಂತು.

ಶ್ರೀನಿವಾಸನು ಯಾರಿಗೂ ಹೇಳದೆ ಇದ್ದಕ್ಕಿದ್ದ ಹಾಗೆಯೇ ಹೊರಟು ಹೋದನು. ಆದರೂ ಸಹ ಸತ್ಯಭಾಮಳ ನೆನಪಾಗುತ್ತಿತ್ತು. ಹೆಂಡತಿಯನ್ನು ಯಾವ ರೀತಿ ಸಮಾಧಾನ ಮಾಡಿದೆ? ಎಂದರು. ಅವನು ಸರಿಯಾದ ಉತ್ತರ ಹೇಳಲಿಲ್ಲ. ಗಂಡ ಅತ್ತೆ ಮಾವಂದಿರೊಡನೆ ಗೌರವದಿಂದ ನಡೆಯುತ್ತಿದ್ದ ಆ ಹುಡುಗಿ

ಏಕೆ ಹೀಗಾಯ್ತು? ಮದುವೆಗೆ ಮುಂಚೆ ಗಂಡನು ಇನ್ನೊಬ್ಬ ಹುಡುಗೀನ ಪ್ರೀತಿಸಿದ್ದನು. ಇದು ದೊಡ್ಡ ವಿಷಯವಾಗಿದೆ ತಲೆಗೆ ಹಚ್ಯಾಳಾಕೆ ಎಂದು ತಮ್ಮನ್ನು ತಾವೇ ಕೇಳಿಕೊಂಡರು. ಮರುದಿನ ಶ್ರೀನಿವಾಸನನ್ನು ಮಾತನಾಡಿಸಿದರು. ಇವನ ಸೆಟಕೂ ಜೋರಾಗಿದೆ. ಸೊಸೆಯ ಮುನಿಸು ಅತಿಯಾಗಿದೆ ಎಂದರು. ಇವರು ಸಹ ಶ್ರೀನಿವಾಸನ ಎಲ್ಲಾ ವಿಚಾರಗಳನ್ನು ಹೇಳಿದರು. ಇದಕ್ಕೆಲ್ಲಾ ಏಕೆ ಕೋಪಿಸಿಕೊಂಡಿದ್ದೀಯಮ್ಮ? ಎಂದು ಕೇಳಿದರು. ಕೆಟ್ಟಮಾತುಗಳನ್ನು ಆಡಬೇಡವೆಂದು ಕೆಂಪಣ್ಣಗೌಡರು ಕೋಪಗೊಂಡರು. ಅವಳ ತಾಯಿಯು ಆಕ್ಷೇಪಿಸಿದರು. ಏನಾದರೂ ತಪ್ಪಿದರೂ ಹೇಳಿ ಎಂದರೂ ಅವನು ಹೋಗುವುದಕ್ಕೆ ಸಿದ್ದನಿರಲಿಲ್ಲ. ಪತ್ನಿ ಕಳಿಸಿದರೂ ತಾಯಿಗೆ ಬೆಲೆಯನ್ನು ಕೊಡದೆ ಹೀನಾಯವಾಗಿ ನಡೆದುಕೊಂಡನು ಎಂದು ಕಣ್ಣೀರು ಹಾಕಿದಳು. ಕುಮುದಿನಿಗೆ ಆರು ತುಂಬಿ ಏಳನೆಯ ತಿಂಗಳು ನಡೆಯುತ್ತಿದ್ದಾಗ ಹೊಟ್ಟೆ ನೋವು ಕಾಣಿಸಿಕೊಂಡಿತು. ತಕ್ಷಣ ಆಸ್ಪತ್ರೆಗೆ ಕರೆದೊಯ್ದು ಸೇರಿಸಿದರು. ಬೆಂಗಳೂರಿನಿಂದ ತಜ್ಞಳಾದ ಲೇಡಿ ವೈದ್ಯರನ್ನು ಕರೆದುಕೊಂಡು ಮಂತ್ರಿಗಳು ಪತ್ನೀಸಮೇತ ಮಂಡ್ಯಕ್ಕೆ ಹೋದರು. ಹೋಗುವ ಹೊತ್ತಿಗೆ ಪೂರ್ತಿ ಬಲಿಯುವ ಮುನ್ನವೇ ಮಗು ಹೊರಬಂದು ಸತ್ತಿತ್ತು. ರಕ್ತ ಸ್ರಾವವನ್ನು ತಡೆಯಲಾರದೆ ಕುಮುದಿನಿ ಹೆಣಗುತ್ತಿದ್ದಾಗ ಪ್ರಜ್ಞೆ ತಪ್ಪಿತು. ಉಳಿದರೆ ಅದೃಷ್ಟ ನಮ್ಮ ಪ್ರಯತ್ನ ಮಾಡ್ತೀದಿವಿ ಎಂದು ಊರಿನ ವೈದ್ಯರು ಹೊರಕ್ಕೆ ಹೇಳಿ ಕಳಿಸಿದರು. ಬೆಂಗಳೂರಿನ ಲೇಡಿ ವೈದ್ಯರು ಒಳಗೆ ಹೋದರು. ಕುಮುದಿನಿ ಉಳಿಯಲಿಲ್ಲ ಬಹಳ ವೀಕ್ ಇಂತವರಿಗೆ ಮೊದಲ ಹೆರಿಗೆಯಲ್ಲಿ ಅಪಾಯವೆಂದು ಹೇಳಿದರು. ಶ್ರೀನಿವಾಸನಿಗೆ ಹೇಳಿ ಕಳಿಸಿದರೂ ಸತ್ತ ಹೆಂಡತಿಯ ಹತ್ತಿರ ಸುಳಿಯಲಿಲ್ಲ, ರಂಗಮ್ಮನ ಮನಸ್ಸಿನಲ್ಲಿ ಪೂಜಾರಿಯ ಶಾಪ ನಿಜವಾಯಿತು ಎಂದು ಹೇಳಿದಳು.

ಜಯಮ್ಮ ಊರಿಗೆ ಬಾಣಂತಿತನಕ್ಕೆ ಹೋಗಿದ್ದಳು. ಮನೆಯ ಹಿತ್ತಿಲ ಬಾಗಿಲಿನಿಂದ ಹಜಾಮರ ಹುಡುಗಿಯಾದ ರುದ್ರಿ ಸೂಳೆ ಮುಂಡೆಯು ಬರುತ್ತಿದ್ದಳು. ಅವಳು ಬರುವುದಕ್ಕೆ ಮುಂಚಿತವಾಗಿ ನರಸಿಂಹ ಜೋಯಿಸರನ್ನ ಪೂಜೆಗೆ, ಗದ್ದೆಗೆ ಅಥವಾ ಹೊಟೇಲು ಹತ್ತಿರಕ್ಕೆ ಕಳುಹಿಸುತ್ತಿದ್ದರು. ಜಯಮ್ಮನು ಹೇಳಿದ ಕೂಡಲೇ ಸತ್ಯಭಾಮಳಿಗೆ ವ್ಯಸನವಾಯಿತು. ಅಡಿಗೆ ಮಾಡುವ ಸೊಸೆ ಬೇಕೆಂಬುದರ ಜೊತೆಗೆ ಈ ಕಾರಣವು ವಿರುವುದರಿಂದ ಶ್ರೀನಿವಾಸನಿಗೆ ಬೇಗ ಮದುವೆಯನ್ನು ಮಾಡಿದರು. ಲಕ್ಷಣವಾದ ಹೆಂಡ್ತಿ ಇರುವಾಗ ವೆಂಕಟೇಶ ಏಕೆ ಹೀಗೆ ಮಾಡಿದನು. ಆದರೂ ಸಮಾಧಾನವಾದಳು. ಒಬ್ಬೊಬ್ಬರ ಸ್ವಭಾವ ಬೇರೆ ಬೇರೆ ರೀತಿಯಲ್ಲಿರುತ್ತವೆ. ತವರು ಮನೆಗೆ ಬಾಣಂತಿತನಕ್ಕೆ ಹೋದಾಗ ಮಾಡಿರಬಹುದು. ಆದರೆ ಈಗ ನಿಂತಿರಬಹುದು ಎಂದಳು. ರುದ್ರಿಯನ್ನು ಇಟ್ಟುಕೊಂಡಿದ್ದೀಯಾ ಎಂದು ಕೇಳಿದರೆ ಯಾವಳು ಹೇಳಿದ್ಲು? ಚಪ್ಪಲಿಯಲ್ಲಿ ಹೊಡಿತೀನಿ ಎಂದರು. ಇಂತಹ ವಿಷಯದಲ್ಲಿ ಯಾರು ಸಹ ಮುಂದೆ ಹೇಳುವುದಿಲ್ಲ. ನಾನು ಸಹ ಅವರ ಹೆಸರನ್ನು ಹೇಗೆ ಹೇಳ್ಲಿ? ಎಂದಳು. ಸತ್ಯಭಾಮಳಿಗೆ ಎಲ್ಲವನ್ನೂ

ಹೇಳಿದಾಗ ಅತ್ತಿಗೆಯ ಮೇಲೆ ಕನಿಕರವು ಬಂದಿತು. ಸತ್ಯಭಾಮಳ ಹತ್ತಿರ ವಿಚಾರವನ್ನು ವಿನಿಮಯ ಮಾಡಿಕೊಂಡಿದ್ದರಿಂದ ಸ್ವಲ್ಪ ಮನಸ್ಸು ಸಮಾಧಾನವಾಯಿತು. ಹೊರ ಜನರುಗಳ ಹತ್ತಿರ ಹೇಳಿದರೆ ಮರ್ಯಾದೆ ಉಳಿಯುತ್ತೆ? ಎಂದಳು.

ಜಮದಗ್ನಿ ಋಷಿಗಳ ಹೆಂಡತಿಯಾದ ರೇಣುಕಾದೇವಿಯನ್ನು ಮಗನಾದ ಪರಶುರಾಮನು ಕುತ್ತಿಗೆಯನ್ನು ಕಡಿದ ಸಂದರ್ಭವು ಎಲ್ಲರಿಗೂ ಪರಿಚಿತವಾಗಿದೆ. ರೇಣುಕಮ್ಮನವರಿಗೆ ಮಾತಂಗಿ ಎಂಬ ಒಬ್ಬ ಸಖಿಯು ಇದ್ದಳು. ಜಮದಗ್ನಿ ಮಹರ್ಷಿಗಳು ಬೆಳಗ್ಗೆ ಪೂಜೆಗೆ ಕುಳಿತಿರುತ್ತಿದ್ದರು. ಪ್ರತಿ ದಿನವು ಕತ್ತಲೆಯಲ್ಲಿ ರೇಣುಕಮ್ಮನವರು ಗುಂಡ್ಲಾಚಮ ನದಿಗೆ ಹೋಗಿ ನೀರನ್ನು ತರುತ್ತಿದ್ದರು. ಆದರೆ ಅವಳ ಜೊತೆಯಲ್ಲಿ ಮಾತಂಗಿಯೂ ಸಹ ಹೋಗುತ್ತಿದ್ದಳು. ಅವರು ಹೋಗುವಾಗ ಗಡಿಗೆ, ಬಿಂದಿಗೆ, ತಗೆದುಕೊಂಡು ಹೋಗುತ್ತಿರಲಿಲ್ಲ. ಪತಿವ್ರತಾ ಶಕ್ತಿಯಿಂದ ನೀರನ್ನೆ ಗಡಿಗೆಯ ಆಕಾರ ಮಾಡಿಕೊಂಡು ತಲೆಯ ಮೇಲೆ ಇಟ್ಟುಕೊಂಡು ತರುತ್ತಿದ್ದರು. ಸಾವಿರ ಕೈಯನ್ನು ಒಳಗೊಂಡಿರುವ ಕಾರ್ತವೀರ್ರ್ಯಾರ್ಜುನನ ರೂಪವನ್ನು ಆಕಾಶದಲ್ಲಿ ನೋಡಿದ್ದಾಗ ಮನಸ್ಸು ಚಂಚಲಿತವಾಯಿತು. ನೀರು ಪಾತ್ರೆಯಿಲ್ಲದೆ ಆಕಾರವಾಗಲಿಲ್ಲ ಋಷಿಗಳಿಗೆ ವಿಷಯ ಅವರ ತಪೋಬಲದಿಂದ ತಿಳಿಯಿತು. ಮಗನನ್ನು ಕರೆದು ನಿಮ್ಮ ತಾಯಿಯನ್ನು ಕೊಂದು ಬಾ ಎಂದು ಹೇಳಿದರು. ಪರಶುರಾಮ ನದೀ ದಡಕ್ಕೆ ಬಂದನು. ಕುತ್ತಿಗೆಗೆ ಗುರಿಯಿಟ್ಟು ಬಾಣ ಬಿಟ್ಟನು. ಹಿಂದೆ ನಿಂತಿದ್ದ ಮಾತಂಗಿಯ ಕುತ್ತಿಗೆಯು ಕತ್ತರಿಸಿ ಬಿತ್ತು. ಆದರೆ ತಂದೆಯು ಮಗನ ವಿಧೇಯತೆಗೆ ಮೆಚ್ಚಿಕೊಂಡನು. ವರ ಕೇಳು ಎಂದಾಗ ನಮ್ಮ ತಾಯಿಯನ್ನು ಬದುಕಿಸಿ ಕೊಡಿ ಎಂದು ಕೇಳಿದನು.

ಜಮದಗ್ನಿ ಋಷಿಗಳು ಕಮಂಡಲದ ನೀರನ್ನು ಕೊಟ್ಟು "ನಿಮ್ಮ ತಾಯಿಯ ತಲೆ, ಶರೀರವನ್ನು ಕೂಡಿಸಿ. ಈ ನೀರನ್ನು ಚಿಮುಕಿಸು ಜೀವವಾಗುತ್ತದೆ"[೨೦] ಎಂದು ಹೇಳಿದರು. ಪರಶುರಾಮ ಬಂದು ನೋಡುತ್ತಾನೆ. ಎರಡು ತಲೆ, ಎರಡು ಶರೀರ ಬಿದ್ದಿರುತ್ತವೆ. ಎರಡನ್ನು ಸೇರಿಸಿ ನೀರು ಚಿಮುಕಿಸಿ ಇಬ್ಬರನ್ನೂ ಬದುಕಿಸಿ ಆಶ್ರಮಕ್ಕೆ ಕರೆದುಕೊಂಡು ಬಂದನು. ಅಷ್ಟರಲ್ಲಿ ಬೆಳಕಾಯಿತು ಬೆಳಕಿನಾಗೆ ನೋಡಿದ ಮಾತಂಗಿ ತಲೇನ ರೇಣುಕಮ್ಮನವರ ಮೈಗೆ, ರೇಣುಕಮ್ಮನವರ ತಲೇನ ಮಾತಂಗಿ ಮೈಗೆ ಕತ್ತಲೆಯಲ್ಲಿ ಅಂಟಿಸಿ ಜೀವ ಬಂದು ತಪ್ಪು ಮಾಡಿದನು. ಈ ತಪ್ಪಿಗೇನು ಮಾಡುವುದು? ಮತ್ತೆ ಸರಿಮಾಡಬೇಕಾದರೆ ಇನ್ನೊಂದು ಸಲ ಇಬ್ಬರ ಕುತ್ತಿಗೇನಾ ಕಡೀಯಬೇಕು. ಆದರೂ ಪಾಪವನ್ನು ಮಾಡಬೇಕು. ಅಂತ ತಂದೆಯವರಿಗೆ ಅಡ್ಡ ಬಿದ್ದು ಕೇಳಿಕೊಂಡನು. ಆದರೆ ಋಷಿಗಳು ಮತ್ತೆ ಕಡೀಬೇಡ ಎಂದು ಹೇಳಿದರು. ರೇಣುಕಮ್ಮನವರ ತಲೆ ಮಾತಂಗಿಯ ಶರೀರವಿದ್ದ ಹೆಂಗಸನ್ನು ತಮ್ಮ ಪತ್ನಿ ಎಂದು

ಒಪ್ಪಿಕೊಂಡರು. ಅಂದರೆ ಮಾತಂಗಿಯ ಶರೀರ ಋಷಿಪತ್ನೀಯದು, ಜಮದಗ್ನಿ ಮಹಾಋಷಿಗಳ ಹೆಂಡತಿ ಶರೀರ ಎಂದು ಹೇಳಿದರು.

ಎಂ.ಎಲ್.ಎ ಬೆಟ್ಟಯ್ಯನವರ ಮಗಳು ಮೀರಾ, ತುಂಬಾ ಚುರುಕಾದ ಬುದ್ಧಿಶಕ್ತಿಯನ್ನು ಹೊಂದಿದ್ದಾಳೆ. ಮೃದು ಸ್ವಭಾವದವಳು ಆಗಿರುವುದರಿಂದ ನಿನಗೆ ತಕ್ಕ ಹೆಂಡತಿಯಾಗಿದ್ದಾಳೆ ಎಂದು ಸತ್ಯಭಾಮಳು ಹೇಳಿದಳು. ಮೋಹನ ದಾಸನನ್ನು ನೋಡಿ ಮದುವೆಯಾಗಬೇಕೆನಿಸಿತ್ತು. ಆದರೆ ಅವನ ಅಹಂಕಾರ, ಕೋಪಗಳನ್ನು ನೋಡಿ ಬೇಡ ಎಂದಳು. ಬೆಂಗಳೂರಿನ ಕಾಲೇಜಿನಲ್ಲಿ ಓದುತ್ತ, ಹುಡುಗಿಯರ ಹಾಸ್ಟೆಲಿನಲ್ಲಿದ್ದ ಮೀರಾಳನ್ನು ಶ್ರೀನಿವಾಸ ಆಗಾಗ ಭೇಟಿಯಾಗತೊಡಗಿದ, ಮೊದ ಮೊದಲು ಮೀರಾ ಸಂಕೋಚ ಪಡುತ್ತಿದ್ದಳಾದರೂ ಕ್ರಮೇಣ ಮೈಛಳಿ ಬಿಟ್ಟು ಅವನೊಡನೆ ಸಲುಗೆಯಿಂದ ವರ್ತಿಸಲಾರಂಭಿಸಿದಳು. ಯೌವನಕ್ಕೆ ಸಹಜವಾದ ಪುರುಷ ಸ್ನೇಹದ ಆಸೆಯ ಜೊತೆಗೆ, ತಮ್ಮದೆ ಊರಿನವನೂ, ಶ್ರೀಮಂತ ಕುಟುಂಬದವನೂ, ಪರಿಚಯಸ್ಥನೂ ಆದ ಶ್ರೀನಿವಾಸನಲ್ಲಿ ಅವಳಿಗೂ ಒಂದು ರೀತಿಯ ಆಕರ್ಷಣೆಯುಂಟಾಗಿತ್ತು. ಶ್ರೀನಿವಾಸ ಬಂದು ಕರೆದರೂ ಮೀರಾಳು ಬರಲ್ಲ ಎಂದರೂ ಕೇಳದೆ ಬಲವಂತ ಮಾಡಿಕೊಂಡು ಶ್ರೀನಿವಾಸ ಹೊರಗೆ ಸುತ್ತಾಡಿಕೊಂಡು ಬರಲು ಕರೆದಾಗ ಅವಳು ಚೆನ್ನಾಗಿ ಅಲಂಕಾರ ಮಾಡಿಕೊಂಡು ಹೊರಡುತ್ತಿದ್ದಳು. ಶ್ರೀನಿವಾಸ ಅವಳನ್ನು ಕಾರಿನಲ್ಲಿ ಕೂರಿಸಿಕೊಂಡು ಹೋಗಿ, ಲಾಲ್‌ಬಾಗ್ ಮುಂತಾದ ಕಡೆಗಳಲ್ಲಿ ಸುತ್ತಾಡಿಕೊಂಡು ದೊಡ್ಡ ದೊಡ್ಡ ಹೋಟೆಲ್‌ಗಳಲ್ಲಿ ತಿಂಡಿ ತಿನ್ನಿಸಿ ಕರೆದುಕೊಂಡು ಬರುತ್ತಿದ್ದ. ಎಲ್ಲಾ ವಿಚಾರಗಳನ್ನು ಮಾತನಾಡಿದರು ನಿವ್ಯಾಕೆ ಇಂಥ ಮಾತನ್ನು ಆಡಿದಿರಿ? ಪದೇ ಪದೇ ವಸತಿ ನಿಲಯಕ್ಕೆ ಶ್ರೀನಿವಾಸನು ಬಂದರೆ ಉಳಿದ ಹುಡುಗಿಯರು ಏನು ತಿಳಿದುಕೊಳ್ಳುತ್ತಾರೆ? ಬೇರೆ ಕೆಲಸವಿದೆ ಎಂದರೂ ಕೇಳಲಿಲ್ಲ. ನಿನ್ನ ಎಲ್ಲಾ ಸ್ವಭಾವಗಳು ನನಗೆ ಹೊಂದುತ್ತವೆ ಎಂದನು.

ಶ್ರೀನಿವಾಸ ಜಾತಿಯನ್ನು ವಿರೋಧಿಸಿದರೂ ಒಪ್ಪುವುದಿಲ್ಲ. ನನ್ನನ್ನು ನೀನು ಕೈ ಬಿಡಬೇಡ ಎಂದು ನನ್ನ ಬಲಗೈ ಹಿಡಿದುಕೊಂಡರು. ಆದರೆ ಕೋಪಮಾಡಿಕೊಂಡು ಬಂದರೂ ಪಾರ್ಕಿನಲ್ಲಿ ಜನರುಗಳು ಇರಲಿಲ್ಲ, ಅವಳ ಕೈ ಹಿಡಿದು ತನ್ನನ್ನು ಒಪ್ಪಿಕೊಳ್ಳುವಂತೆ ಬೇಡಿಕೊಂಡಿದ್ದ, ಮೀರಾಳು ತನ್ನ ಕೈ ಬಿಡಿಸಿಕೊಂಡು ಎದ್ದಾಗ ಮತ್ತೆ ಅವಳ ಕೈಹಿಡಿದು "ನೀನು ಹೀಗೆ ಎದ್ದು ಹೊರಟುಹೋದರೆ ನಾನು ಉಳಿಯೋಲ್ಲ, ನಿನ್ನ ಕೈಮುಟ್ಟಿ ನನಗೆ ಒಂದು ಔನ್ಸ ವಿಷ ಕೊಟ್ಟು ಹೋಗು"[೨೧] ಎಂದು ತೀರ್ಮಾನ ಮಾಡಿದ್ದನು. ಇದಾದ ನಾಲ್ಕು ದಿನಗಳ ಮೇಲೆ ಅಲ್ಲಿವರೆಗೆ ನಡೆದ ಎಲ್ಲ ಸಂಗತಿಗಳನ್ನೂ ವಿವರಿಸಿ ಮೀರಾ ಸತ್ಯಭಾಮೆಗೆ ಕಾಗದ ಬರೆದಳು. ನನಗೆ ಊಟ ತಿಂಡಿ ಸೇರುತ್ತಿಲ್ಲ. ನಿದ್ರೆ ಬರುತ್ತಿಲ್ಲ. ಓದುವುದನ್ನು ಬಿಟ್ಟು ಊರಿಗೆ ಬರಬೇಕು ಎಂದು ತೀರ್ಮಾನ ಮಾಡಿದ್ದೇನೆ. ಆದ್ದರಿಂದಲೇ ನನಗೆ ತಿಳುವಳಿಕೆಯನ್ನು

ಹೇಳಬೇಕು. ಶ್ರೀನಿವಾಸನ ಹತ್ತಿರ ಈ ಮಾತುಗಳನ್ನು ಯಾಕೆ ಮಾತನಾಡಿದಿರಿ? ಸತ್ಯಭಾಮಳಿಗೆ ತಾನು ಮಾತನಾಡಿದ್ದು ತಪ್ಪು ಎಂಬ ಅರಿವಾಯಿತು. ನಿಮ್ಮ ತಂದೆಯವರು ಹರಿಜನ ಹುಡುಗಿಯ ಮದುವೆಗೆ ಒಪ್ಪುವುದಿಲ್ಲ. ಅದನ್ನು ಸರಿಯಾಗಿ ತಿಳಿದುಕೊಂಡು ಯೋಚನೆಯನ್ನು ಮಾಡು, ಅವಳ ಜೀವನ ಹಾಳಾಗಬಾರದು ಎಂದು ಶ್ರೀನಿವಾಸನಿಗೆ ಎಚ್ಚರಿಸಿದಳು. ಮೀರಾಳಿಗೆ ಮದುವೆಯ ವಿಚಾರದಲ್ಲಿ ನಿನ್ನ ತಂದೆ ತಾಯಿ ಒಪ್ಪುತ್ತಾರೆಯೇ? ಎಂದು ಕೇಳಿದಾಗ ಮೀರಾ ಮಾತನಾಡಲು ಕಷ್ಟಪಡುತ್ತಿದ್ದಳು.

ಮೋಹನದಾಸ ವಿರೋಧಿಸಬಹುದು. ಆದರೂ ಅವನನ್ನು ಒಪ್ಪಿಸೋದು ಕಷ್ಟವಾಗಲಿಕ್ಕಿಲ್ಲ. ಅಪ್ಪನವರ ದೃಷ್ಟಿಯೇ ಬೇರೆ ಎಂದಳು. ಬೆಟ್ಟಯ್ಯನವರನ್ನು ಒಪ್ಪಿಸುವ ಜವಾಬ್ದಾರಿಯನ್ನು ತಾನೇ ತೆಗೆದುಕೊಂಡು ಸತ್ಯಭಾಮೆ ಒಂದು ರೀತಿಯ ಸಂತೃಪ್ತಿಯಿಂದ ಊರಿಗೆ ಬಂದಿದ್ದಳು. ಸತ್ಯಭಾಮೆಯು ತಾವಿದ್ದಲ್ಲಿಗೇ ಬಂದು ಮದುವೆಯ ಮಾತಾಡಿಕೊಂಡು ಹೋದ ಮೇಲೆ ಇಬ್ಬರಿಗೂ ಸಲುಗೆಯಿಂದ ವರ್ತಿಸಲು ಪರವಾನಗಿ ಸಿಕ್ಕಿದಂತಾಯಿತು. ಶ್ರೀನಿವಾಸ ಹೊಸ ಉತ್ಸಾಹದಿಂದ ಕರೆಯಲು ಬಂದಾಗ ಮೀರಾ ಕೂಡ ಉತ್ಸಾಹದಿಂದ, ಕಣ್ಸೆಳೆಯುವಂತೆ ಅಲಂಕಾರ ಮಾಡಿಕೊಂಡು ಹೊರಡುತ್ತಿದ್ದಳು. ಒಂದು ದಿನ ಶ್ರೀನಿವಾಸ ಅವಳನ್ನು ಭವ್ಯವಾದ ಹೋಟೆಲಿಗೆ ಕರೆದುಕೊಂಡು ಹೋಗಿ ಫ್ಯಾಮಿಲಿ ರೂಂನಲ್ಲಿ ಕೂತು ತಿಂಡಿ ತಿನ್ನುತ್ತ ಮಾತಾಡುವಾಗ ತನ್ನ ಜೇಬಿನಲ್ಲಿಟ್ಟುಕೊಂಡು ಬಂದಿದ್ದ ಐದಳೆ ಚಿನ್ನದ ಸರವನ್ನು ತನ್ನ ಎರಡು ಕೈಗಳಿಂದಲೂ ಕೊರಳಿಗೆ ಹಾಕಿದ ಮೀರಾಳು ಇಂತಹಾದೆಲ್ಲ ಯಾಕೆ ಮಾಡಿಸಿದಿರಿ? ಎಂದು ಕೇಳಿದಾಗ ಮನೆಗೆ ಬರುವ ಸೊಸೆಯವರು ಹಾಕುವ ಸರವಿದು. ಹಾಗಾದರೆ ತಂದೆ ತಾಯಿಯವರು ಒಪ್ಪಿದರೆ? ಎಂದಾಗ ಒಪ್ಪದಿದ್ದರೂ ಒಪ್ಪಿಸುವುದು ಎಂದರು.

ಶ್ರೀನಿವಾಸ ಮತ್ತೊಂದು ದಿನ ವಜ್ರದ ಓಲೆಗಳನ್ನು ತಂದುಕೊಟ್ಟು ಇದನ್ನು ಹಾಕಿಕೊಂಡರೆ "ನೀನು ಥೇಟ್ ವೈಜಯಂತಿ ಮಾಲಾ ಥರಾ ಕಾಣಿಸ್ತೀಯಾ"[೨೨] ಎಂದು ಹೊಗಳಿದ, ಮೀರಾಳಿಗೆ ಅದೇಕೋ? ರಿಜಿಸ್ಟಾರ್ ಮದುವೆ ಇಷ್ಟವಾಗಲಿಲ್ಲ. ನಾವು ಅಗ್ನಿಸಾಕ್ಷಿಯಾಗಿಯೇ ಮದುವೆಯಾಗಬೇಕು. ಜೊತೆಯಾಗಿ ಕೂತು. ಎತ್ತರವಾಗಿ ಉರಿಯುವ ಅಗ್ನಿಗೆ ತುಂಬ ತುಪ್ಪ ಹಾಕಿ ಹವನ ಮಾಡಬೇಕು. ಎಂದಳು ಮೀರಾ ಇಬ್ಬರೂ ಜನಿವಾರ ಹಾಕಿಕೊಂಡು ಬ್ರಾಹ್ಮಣರಾಗೋದು. ಹೋಮ ಹವನಗಳನ್ನು ಮಾಡೋದು ಎಲ್ಲ ತಮಾಷೆಯಾಗಿ ಕಂಡಿತು. ಶ್ರೀನಿವಾಸನಿಗೆ, ನಂದಿ ಬೆಟ್ಟಕ್ಕೂ ಹೋಗಿ ಸುತ್ತಾಡಿಕೊಂಡು ಬಂದಿದ್ದರು. ಇದ್ದಕ್ಕಿದ್ದಂತೆ ಒಂದು ದಿನ ಬಂದ ಶ್ರೀನಿವಾಸನ ಕಾಗದವನ್ನು ನೋಡಿ ಮಂತ್ರಿ ಮೇಲಗಿರಿಗೌಡರಿಗೆ ದೊಡ್ಡ ಆಘಾತವಾಗಿತ್ತು. ಅವರು ಕಿಡಿಕಿಡಿಯಾದರು. ಅವನು ಬರೆದಿರುವಂತೆ ಬೆಟ್ಟಯ್ಯನವರ ಮಗಳನ್ನು ಮದುವೆಯಾಗಿಬಿಟ್ಟರೆ, ತಮ್ಮ ರಾಜಕೀಯ ಭವಿಷ್ಯ ಮಣ್ಣು ಪಾಲಾಗುವುದೆಂದು ಅವರಿಗೆ ದಿಗಿಲಾಯಿತು. ಆದರೆ ವಂಶದ ಗೌರವಗಳು, ಬೆಲೆಗಳು, ಸಿಕ್ಕುವುದಿಲ್ಲ.

ಮದುವೆಯ ವಿಚಾರದಲ್ಲಿ ದುಡುಕಬೇಡವೆಂದು ಮಗನಿಗೆ ಹೇಳಿದರು. ಆದರೂ ಸಹ ಕೇಳುವ ಸ್ಥಿತಿಯಲ್ಲಿರಲಿಲ್ಲ. ಇದನ್ನು ತಪ್ಪಿಸಲು ಸಮರ್ಥರು ಯಾರೆಂದು ಯೋಚಿಸಿದಾಗ ಅವರ ಬುದ್ಧಿಗೆ ಗೋಚರಿಸಿದವನು ಚಾಣಾಕ್ಷ ವೆಂಕಟೇಶ, "ಕಾರ್ಯವಾಸಿ ಕತ್ತೆ ಕಾಲ್ಕಟ್ಟು"[೨೩] ಎಂಬುದನ್ನು ಅವರು ಹೊಸದಾಗಿ ಕಲಿಯಬೇಕಾಗಿರಲಿಲ್ಲ.

ಮಂತ್ರಿಗಳೇ ಖುದ್ದಾಗಿ ವೆಂಕಟೇಶನ ಮನೆಗೆ ಹೋಗಿ, ವೆಂಕಟೇಶು ಎಂದು ಆತ್ಮೀಯತೆಯಿಂದ ಮಾತಾಡಿಸಿದರು. ತಮಗೆ ಬರೆದಿರುವ ಕಾಗದಲ್ಲಿ ನನ್ನ ಮಗ ಬೆಟ್ಟಯ್ಯರ ಮಗಳನ್ನು ಮದುವೆಮಾಡಿಕೊಳ್ಳುತ್ತೇವೆ ಇದರ ಹಿಂದೆ ನಿನ್ನ ತಂಗಿಯ ತಂತ್ರ ಏನೋ ನಡೆದಿದೆ. ಇದನ್ನು ಆತನಿಗೆ ಬುದ್ಧಿಹೇಳಿ ತಪ್ಪಿಸಬೇಕಾದರೆ ನಿನ್ನೆ ಸರಿ. ತನ್ನ ಮಾತಿಗೆ ತಿರಸ್ಕರಿಸಬೇಡವೆಂದು ಸಂದಿಗ್ಧವನ್ನು ಹೇಳಿಕೊಂಡರು. ಅವನು ಅಪೇಕ್ಷಿಸಿದಂತೆ ಊರಾಚೆ ಹಳ್ಳದ ಬದಿಯಲ್ಲಿ ತೆಂಗಿನ ಸೊಸಿ ಬೆಳೆಸಲು ಅನುಕೂಲವಾದ ಹತ್ತೆಕೆರೆ ಜಮೀನನ್ನು ಅವನ ಹೆಸರಿಗೆ ಮಂಜೂರು ಮಾಡಿಸಿಕೊಡುವುದಾಗಿ ಆಮಿಷವೊಡ್ಡಿದರು. ಈ ವಿಚಾರದಲ್ಲಿ ಸಹಾಯ ಮಾಡಲು ನೀನೊಬ್ಬನೇ ಸಮರ್ಥ ಎಂದು ಪುಸಲಾಯಿಸಿದರು. "ಸಂದು ಹಿಡಿದು ಮೀಟಿದರೆ ಇದೇನು ಜರುಗದ ಬಂಡೆಯಲ್ಲ"[೨೪] ಎನಿಸಿತು ವೆಂಕಟೇಶನಿಗೆ, ಮಂತ್ರಿಗಳ ಕೆಲಸ ಮಾಡಿಕೊಡಲು ಒಪ್ಪಿಕೊಂಡಿದ್ದನು.

ಅಂಗಡಿಯ ಸಾಮಾನು ಕೊಳ್ಳುವ ನೆಪದಲ್ಲಿ ತುಮಕೂರಿಗೆ ಹೋದವನು. ಶ್ರೀನಿವಾಸನ ಕೋಣೆಗೆ ಹೋಗಿ ಲೋಕಾಭಿರಾಮವಾಗಿ ಮಾತಾಡುತ್ತ ಕುಳಿತಿದ್ದ ಸಮಯ ಸಾಧಿಸಿ ತನ್ನ ಬತ್ತಳಿಕೆಯಿಂದ ಸರ್ಪಾಸ್ತ್ರ ತೆಗೆದು ಪ್ರಯೋಗಿಸಿದ. ತನ್ನ ತಂಗಿ ಈಗ ಮೋಹನದಾಸನ ಕಡೆಗೆ ಒಲಿದಿದ್ದಾಳೆಂದು ಹೇಳಿ. ಪಾಳೇಗಾರ ವಂಶದ ನಿನ್ನನ್ನೇ ಬೇಡವೆಂದನು ನಾನು ಈ ಮಾದಿಗನನ್ನು ಹ್ಯಾಗಪ್ಪ ಭಾವ ಅಂತ ಕರೀಲಿ ಎಂದು, ತನ್ನ ಒಳಗೆ ಇಲ್ಲದ ದುಃಖ ತೋಡಿಕೊಂಡಿದ್ದ "ಏನ್ರೀ ನೀವನ್ನೋದು, ನಾನು ಮದುವೆಯೇ ಆಗುಲ್ಲ ಅಂತಿದ್ಲು ನಿಮ್ಮ ತಂಗಿ"[೨೫] ಶ್ರೀನಿವಾಸ ಉದ್ವಿಗ್ನನಾಗಿ ಕೇಳಿದ್ದ, ಹಾಗಾದರೆ ಮಾದಿಗನಿಗಿಂತ ನಾನು ಕಡಿಮೆಯೆ? ಎಂಬ ಪ್ರಶ್ನೆ ರಾತ್ರಿಯಲ್ಲಿ ನಿದ್ದೆಯನ್ನು ಮಾಡಲಿಲ್ಲ. ಶ್ರೀನಿವಾಸನ ಹತ್ತಿರ ಹೋಗಬೇಕೆನ್ನುವುದರಲ್ಲಿ ಮೀರಾಳಿಗೆ ಕಾಗದ ಬಂತು. ಅದರಲ್ಲಿ ತಲೆತಿರುಗುವಂತಹ ವಾಕ್ಯಗಳಾದ "ನನ್ನನ್ನು ಮರೆತುಬಿಡು, ನಾನು ನಿನ್ನನ್ನು ಮದುವೆಯಾಗುವುದಿಲ್ಲ. ಸಾಯುವ ತನಕ ನಾನು ಒಂಟಿಯಾಗಿರುತ್ತೇನೆ"[೨೬] ಎಂದು ನೋಡಿದ ಕ್ಷಣ ದಿಗ್ಭ್ರಮೆಯಾದಂತಾಗಿ ಗರಬಡಿದವಳಂತೆ ಮಂಚದಲ್ಲಿ ಕುಳಿತಳು. ಅನಂತರ ಬಿಕ್ಕಿ ಬಿಕ್ಕಿ ಅತ್ತಳು. ತಾನೇ ತುಮಕೂರಿಗೆ ಹೋಗಿ ನೋಡುವ ಸಲುವಾಗಿ ಮೀರಾ ಶ್ರೀನಿವಾಸನ ರೂಮಿಗೆ ಬಂದಾಗ, ಅವನು ಹಿಂದಿನ ರಾತ್ರಿ ಕುಡಿದಿದ್ದ ವಿಸ್ಕಿಯ ಅಮಲಿನಲ್ಲಿಯೇ ಇದ್ದ ತೂರಾಡುತ್ತ ಬಂದು ಬಾಗಿಲು ತೆರೆದಾಗ ಮೀರಾ ಒಳಗೆ ಹೋದಳು. ರೂಮಿನ ತುಂಬ ಸಿಗರೇಟು

ವಾಸನೆ ತುಂಬಿಕೊಂಡಿತ್ತು. ಹೇಗೋ ಸಹಿಸಿಕೊಂಡು ಮೀರಾ ಒಳಗೆ ಹೋಗಿ ಮಂಚದ ತುದಿಯಲ್ಲಿ ಕುಳಿತಳು.

ಶ್ರೀನಿವಾಸ ನೀನ್ಯಾರು? ಎಂದು ಹುಚ್ಚು ಹುಚ್ಚಾಗಿ ಮಾತನಾಡತೊಡಗಿದ. ಮೀರಾ ತನ್ನ ವ್ಯಾನಿಟಿ ಬ್ಯಾಗ್‌ನಲ್ಲಿದ್ದ ಫೋಟೋ ತೆಗೆದು ಅವನ ಮುಂದೆ ಹಿಡಿದಾಗ, ಅದನ್ನು ಕೈಲಿ ತೆಗೆದುಕೊಂಡು ನೋಡುತ್ತಾ 'ವಾಹ್ ಬ್ಯೂಟಿಫುಲ್' ವಜ್ರದ ಓಲೆ ಹೇಗೆ ಹೊಳೆಯುತ್ತೆ, ಒಂದಲ್ಲ ನಾಲ್ಕು ಚಿನ್ನದ ಸರ ಹಾಕಬೇಕು. ಬಾ ಮಜಾ ಮಾಡೋಣ, ಮಂಚದ ತುದಿಯಲ್ಯಾಕೆ ಕೂತಿದೀಯಾ? ಕಿಟಕಿಯ ಬಾಗಿಲು ಹಾಕ್ತೀನಿ ತಡಿ ಎಂದು ಅವನು ಎದ್ದಾಗ ಮೀರಾಳಿಗೆ ಅವನ ನಡತೆಯನ್ನು ಕಂಡು ಅಸಹ್ಯವಾಯಿತು. ಮಂಚದ ಮೇಲಿಂದ ಎದ್ದು ಬಾಗಿಲ ಬಳಿ ಹೋಗಿ ನಿಂತು, ನಿಮಗೆ ಬುದ್ಧಿ ಸರಿಯಾಗಿಲ್ಲ ಎಂದು ಗದರಿದಳು.

"ಸರಿಯಾಗಿಯೇ ಇದೆ ನೀನಿರೋದೆ ಮಜಾ ಮಾಡೋಕೆ, ಬೇಕಾದಷ್ಟು ಚಿನ್ನ ಮಾಡಿಸ್ಕೊಡ್ತೀನಿ, ಹಾರುವಯ್ಯ ಮಾತಂಗಿಗೆ ಎರಡು ಸಾವಿರ ರೂಪಾಯಿ ಕೊಟ್ಟಂತೆ, ನಾನು ನಿನಗೆ ನಾಲ್ಕು ಸಾವಿರಕ್ಕೆ ವಾಲೇನೆ ಮಾಡ್ಸಿದೀನಿ"[೨೭] ಮೀರಾಳಿಗೆ ಅಳು ಬಂದಿತು. ಯಾಕೆ ಅಳ್ತೀಯಾ ಅರುಂಧತಿ, ಹೊಸ ಆಶ್ರಮ ಕಟ್ಟಿಸ್ತೀನಿ, ನಿನ್ನ ಕೈ ಬಿಡುಲ್ಲ ಎಂದು ಗಳಹುತ್ತಲೇ ಇದ್ದ, ಮೀರಾ ಮಂಚದ ಬಳಿ ಬಿದ್ದಿದ್ದ ಫೋಟೋವನ್ನೂ, ಕಾಗದಗಳನ್ನೂ ಎತ್ತಿಕೊಂಡು. ಅವನ ಮಾತುಗಳನ್ನು ಕಿವಿಗೆ ಹಾಕಿಕೊಳ್ಳದೆ ಮೆಟ್ಟಿಲಿಳಿದು ರಸ್ತೆಗೆ ಬಂದಿದ್ದಳು.

ಇದ್ದಕ್ಕಿದಂತೆ ಮಧ್ಯಾಹ್ನದ ಹೊತ್ತಿಗೆ ಬಂದ ಮೀರಾ ತುಂಬಾ ಉದ್ವಿಗ್ನಳಾಗಿದ್ದುದರಿಂದ ಸತ್ಯಭಾಮೆ ಆಗಲೇ ಅವಳು ಬಂದ ವಿಚಾರವನ್ನೇನು ಕೇಳಲಿಲ್ಲ. ಊಟ ಮಾಡಿ ಮೀರಾ ಸ್ವಲ್ಪ ಹೊತ್ತು ವಿಶ್ರಾಂತಿ ತೆಗೆದುಕೊಂಡ ಮೇಲೆ ಸಂಜೆ ಇಬ್ಬರೂ ಕೊಳದ ಬರಿ ಮಾತಾಡುತ್ತ ಕುಳಿತರು. ತಾನು ತುಮಕೂರಿಗೆ ಹೋದಾಗ ಶ್ರೀನಿವಾಸ ನಡೆದುಕೊಂಡ ರೀತಿಯನ್ನು ಮೀರಾ ಸಂಕ್ಷೇಪವಾಗಿ ಹೇಳಿ. ಶ್ರೀನಿವಾಸ ತನ್ನನ್ನು ನೋಡಲು ಆಗಾಗ ಹಾಸ್ಟೆಲಿಗೆ ಬರುತ್ತಿದ್ದುದು. ತಾವಿಬ್ಬರೂ ನಂದಿಬೆಟ್ಟದ ರೂಮಿನಲ್ಲಿದ್ದುದು. ಆದರೆ ಇದ್ದಕ್ಕಿದ್ದ ಹಾಗೆ ಮಾತು ಬದಲಾಯಿಸಿದರೆ ಅವಳ ಗತಿ ಏನು? ಅವಳ ಜೊತೆ ಇಷ್ಟೆಲ್ಲ ಸುತ್ತಾಡಿ ಈಗ ಯಾಕೆ ತಪ್ಪಿಸ್ಕತ್ತಿದೀಯ? ಇಬ್ಬರೂ ಜೊತೆಯಾಗಿ ತೆಗೆಸಿಕೊಂಡ ಫೋಟೋಗಳು ಹೀಗೆ ತನ್ನ ಬಳಿ ಬೇಕಾದಷ್ಟು ಸಾಕ್ಷ್ಯಗಳಿವೆ ಎಂದಿದ್ದಳು. ಮೀರಾ, "ಇದೆಲ್ಲವನ್ನೂ ಸಾಕ್ಷಿಯಾಗಿಟ್ಟುಕೊಂಡು ಅವನನ್ನು ಕೋರ್ಟಿಗೆಳೆದರೆ, ಅವನು ಬ್ರಹ್ಮಾಂಡ ಹೊಕ್ಕರೂ ತಪ್ಪಿಸಿಕೊಳ್ಳಲಾಗುವುದಿಲ್ಲ"[೨೮] ಎಂದಳು ಸತ್ಯಭಾಮೆ. ಆದರೆ ಪ್ರೀತಿ, ಪ್ರೇಮ ಎಂದರೆ ಬಲಾತ್ಕಾರವಾಗಿ, ಬೆದರಿಸಿ ಹುಟ್ಟಿಸುವಂಥದಲ್ಲ. ಅಂತಹ ಮದುವೆ ನನಗೆ ಬೇಡವೇ ಬೇಡ. ಶ್ರೀನಿವಾಸನಿಗೆ ನನ್ನ ಮೇಲೆ ಪ್ರೀತಿ ಇಲ್ಲ. ಕಾಮದ ಮೇಲೆ ಪ್ರೀತಿ ಇದೆ. ಕುಡಿದಾಗಿನ

ಮಾತಿನಲ್ಲಿ ಗೊತ್ತಾಯಿತು. ಬಲವಂತ ಮಾಡಿ ಹೆದರಿಸಿದರೆ ಪ್ರೀತಿ ಬರುತ್ತದೆಯೆ? ಆದರೂ ಬರುವುದಿಲ್ಲ. ಎಂದು ಮೀರಾ ನಿರ್ಧಾರಕವಾಗಿ ಹೇಳಿದಳು. ಹೀಗಾಗಿ ಶ್ರೀನಿವಾಸನ ಮೇಲೆ ಕೇಸು ಹಾಕುವ ವಿಚಾರವನ್ನು ಇಬ್ಬರೂ ಕೈಬಿಟ್ಟರು.

ಬೆಳಗ್ಗೆ ಎದ್ದಾಗ ಮೀರಾ ಜನಿವಾರ ಹಾಕಿಕೊಳ್ಳುವ, ಹೋಮ ಹವನ ಮಾಡುವ, ಅಗ್ನಿಪೂಜೆ ಮಾಡುವ ಆಸೆಯನ್ನು ವ್ಯಕ್ತಪಡಿಸಿದಳು. ಸ್ನಾನ ಮಾಡಿಕೊಂಡು, ಮಡಿ ಸೀರೆಯುಟ್ಟು ಬಂದ ಮೀರಾಳಿಗೆ ಸತ್ಯಭಾಮೆಯು ಯಜ್ಞೋಪವೀತ ಧಾರಣೆ ಮಾಡಿಸಿ, ಗಾಯತ್ರೀ ಮಂತ್ರವನ್ನು ಹೇಳಿಕೊಟ್ಟಳು. ಅವಳಿಂದ "ಓಂ ಅಗ್ನಿಯೇ ನಮಃ" ಇತ್ಯಾದಿಯಾಗಿ ಮಂತ್ರಹೇಳಿಸಿ ಹವನ ಮಾಡಿಸಿದಳು. ಅಗ್ನಿಗೆ ಪ್ರದಕ್ಷಿಣೆ ಮಾಡಿಬಂದ ಮೀರಾ ಸತ್ಯಭಾಮೆಗೂ ಕಾಲು ಮುಟ್ಟಿ ನಮಸ್ಕಾರ ಮಾಡಿ ಹೋಗಿ ಬರ್ತಿನಿ ಎಂದಳು.

"ನನಗೇಕೆ ನಮಸ್ಕಾರ ಮಾಡಿದೆ?" ಸತ್ಯಭಾಮಳ ಪ್ರಶ್ನೆ,

"ನಾನು ಮಾದಿಗಿತ್ತಿಯಲ್ಲಿ ಅಂತ ಒಪ್ಪಿ, ಜನಿವಾರ ಹಾಕಿದಿರಲ್ಲ ಅದಕ್ಕೆ"

"ಯಾರೂ ಮಾದಿಗಿತ್ತಿಯರಲ್ಲ"

"ನಿಮಗೆ ತಿಳಿಯೋಲ್ಲ, ನೀವು ಬರೀ ವೇದಾಂತ ಹೇಳ್ತೀರಾ ಅಷ್ಟೇ"[೨೯] ಮೀರಾ ಅರ್ಧ ಸತ್ಯಭಾಮೆಗೆ, ಅರ್ಧ ತನಗೇ ಹೇಳಿಕೊಳ್ಳುವಂತೆ ಮೆಲ್ಲನೆ ಮಾತಾಡಿದಳು. ಅವಳ ಕಣ್ಣು ಕಣ್ಣುಗಳಲ್ಲಿ ನೀರು ತುಂಬಿಕೊಂಡು ಅಂದಿನಿಂದ ಬ್ರಾಹ್ಮಣಳಾದಳು, ಮೀರಾ.

ರಾತ್ರಿ ತಡವಾಗಿ ಮಲಗಿ ನಿದ್ದೆ ಹೋದ ಮೇಲೆ ಸತ್ಯ ಬೆಳಗ್ಗೆ ಎದ್ದು ಮುಖ ತೊಳೆಯುವಷ್ಟರಲ್ಲಿ ಒಬ್ಬ ಕಾನ್‌ಸ್ಟೇಬಲ್ ಬಂದು ಬೆಟ್ಟಯ್ಯನವರ ಮಗಳು ನಿಮ್ಮ ತಂದೆ ಬಿದ್ದ ಜಾಗದ ಕೆರೆಯಲ್ಲಿ ಬಿದ್ದು ಸತ್ತಿದ್ದಾರೆ. ಮಹಜರು ನಡೀತಿದೆ ಏರಿ ಹತ್ತಿರ ನೀವು ಬರಬೇಕಂತೆ ಎಂದು ತಿಳಿಸಿದ. "ಸ್ವ ಇಚ್ಛೆಯಿಂದ ಆತ್ಮಹತ್ಯೆ ಮಾಡಿಕೊಂಡಿದ್ದೇನೆ ಯಾರದೂ ಯಾವ ರೀತಿಯಲ್ಲೂ ಜಾವಾಬ್ದಾರಿಯಿಲ್ಲ"[೩೦] ಎಂದು ಬರೆದು ರುಜು ಹಾಕಿದ ಕಾಗದಕ್ಕೆ ಹಿಂದಿನ ದಿನದ ತಾರೀಖು ಹಾಕಲಾಗಿತ್ತು. ಕಾಗದವನ್ನು ಹಾಕಿದ ಕವರನ್ನು ಒಂದು ಕಲ್ಲಿನ ಮೇಲಿಟ್ಟು ಅದರ ಮೇಲೆ ಮತ್ತೊಂದು ಕಲ್ಲು ಹೇರಲಾಗಿತ್ತು. ಮಡಿಸಿಟ್ಟಿದ ಮೀರಾಳ ಜನಿವಾರ ಕವರಿನ ಮೇಲೆಯೇ ಇತ್ತು. ಮೀರಾಳ ತಂದೆ ತಾಯಿಯವರು ಕಣ್ಣೀರು ಹಾಕುತ್ತಿದ್ದರು. ಪೋಲೀಸರು ಸಣ್ಣ ಕಾಗದವನ್ನು ಸತ್ಯಭಾಮಳ ಕೈಗೆ ಕೊಟ್ಟರು. ಆದರೆ ನಿನ್ನೆ ನಿಮ್ಮ ಹತ್ತಿರವಿದ್ದರಿಂದ ನೀವು ಹೇಳಿಕೆ ಕೊಡಿ ಎಂದರು. ನಾನು ಹೇಳಿಕೆ ಕೊಡುತ್ತೇನೆ ಅವಳ ವ್ಯಾನಿಟಿ ಬ್ಯಾಗ್ ನೋಡಿದ್ದೀರಾ? ಎಂದು ಕೇಳಿದಳು. ಅದನ್ನು ಅದನ್ನು ತರಿಸಿ ನೋಡಿದಾಗ ಅದರಲ್ಲಿ ಎಲ್ಲಾ ವಸ್ತುಗಳ ವಿವರಗಳು ಸಿಕ್ಕಿದವು. ಬೆಟ್ಟಯ್ಯನವರ ಮಗಳು ಆತ್ಮಹತ್ಯೆ ಮಾಡಿಕೊಂಡ ವಿಚಾರ ತಿಳಿದ ತಕ್ಷಣವೇ ಮಂತ್ರಿಗಳು ಬೆಂಗಳೂರಿನಿಂದ ಧಾಪಿಸಿ ಬಂದಿದ್ದರು. ಪೋಲೀಸಿನವರು ಕೇಸುಗೀಸು ಏನು ಮಾಡಲಿಲ್ಲ. ವೆಂಕಟೇಶನೇ

ಊರಿನ ಪತ್ರಿಕಾ ಪ್ರತಿನಿಧಿಯಾಗಿದ್ದುದರಿಂದ ಆ ಹುಡುಗಿಯ ಆತ್ಮಹತ್ಯೆಯು ಸುದ್ದಿ ದಿನಪತ್ರಿಕೆಗಳಲ್ಲೂ ವರದಿಯಾಗಲಿಲ್ಲ. ಕೊನೆಗೂ ಸಹ ತನ್ನ ಸೇಡನ್ನು ತೀರಿಸಿಕೊಂಡು ಒಂದು ಜೀವಕ್ಕೆ ಬಲಿಯಾಗುವಂತೆ ಮಾಡಿದ್ದನ್ನು ಕಾದಂಬರಿಯಲ್ಲಿ ಕಾಣಬಹುದಾಗಿದೆ.

**ಕೊನೆ ಟಿಪ್ಪಣಿಗಳು**

೧ ದಾಟು ಎಸ್.ಎಲ್. ಭೈರಪ್ಪ — ಪುಟ ಸಂಖ್ಯೆ ೩೩,೧,೨,೩
ಪುಟ ಸಂಖ್ಯೆ ೧೨೪,೪
ಪುಟ ಸಂಖ್ಯೆ ೧೬೧,೫

೨. ಡಾ.ಎಸ್.ಎಲ್ ಭೈರಪ್ಪನವರ ಕಾದಂಬರಿಗಳೊಡನೆ
ಧರ್ಮ, ಕರ್ಮ, ಜಿಜ್ಞಾಸೆ, ಡಾ.ಕೆ.ಎಲ್. ಗೋಪಾಲಕೃಷ್ಣಯ್ಯ, — ಪುಟ ಸಂಖ್ಯೆ ೧೭೮.೬

೩. ಭೈರಪ್ಪನವರ ಕಾಂದಬರಿಗಳಲ್ಲಿ ಸ್ತ್ರೀ ಪಾತ್ರಗಳು
ಡಾ.ಆರ್.ಎಸ್. ದಿಂಡೂರ, — ಪುಟ ಸಂಖ್ಯೆ ೧೯೭.೭

೪. ಡಾ.ಎಸ್.ಎಲ್. ಭೈರಪ್ಪನವರ ಕಾದಂಬರಿಗಳೊಡನೆ
ಧರ್ಮ, ಕರ್ಮ, ಜಿಜ್ಞಾಸೆ, ಡಾ.ಕೆ.ಎಲ್. ಗೋಪಾಲ ಕೃಷ್ಣಯ್ಯ. — ಪುಟ ಸಂಖ್ಯೆ ೧೭೮.೮
ಪುಟಸಂಖ್ಯೆ ೧೮೦,೯,೧೦,೧೧,೧೨,೧೩
ಪುಟ ಸಂಖ್ಯೆ ೧೮೧,೧೪,೧೫,೧೬
ಪುಟ ಸಂಖ್ಯೆ ೧೮೨.೧೭
ಪುಟ ಸಂಖ್ಯೆ ೧೮೫.೧೮
ಪುಟ ಸಂಖ್ಯೆ ೧೮೬.೧೯

೫. ದಾಟು ಎಸ್.ಎಲ್. ಭೈರಪ್ಪ, — ಪುಟ ಸಂಖ್ಯೆ ೨೭೬,೨೦
ಪುಟ ಸಂಖ್ಯೆ ೩೪೪, ೨೧

೬. ಡಾ.ಎಸ್.ಎಲ್. ಭೈರಪ್ಪನವರ ಕಾದಂಬರಿಗಳೊಡನೆ
ಧರ್ಮ, ಕರ್ಮ, ಜಿಜ್ಞಾಸೆ, ಡಾ.ಕೆ.ಎಲ್. ಗೋಪಾಲ ಕೃಷ್ಣಯ್ಯ. — ಪುಟ ಸಂಖ್ಯೆ ೧೯೬,೨೨
ಪುಟ ಸಂಖ್ಯೆ ೧೯೭,೨೩,೨೪,೨೫

೭. ದಾಟು ಎಸ್.ಎಲ್. ಭೈರಪ್ಪ — ಪುಟ ಸಂಖ್ಯೆ ೩೭೦,೨೬

೮. ಡಾ.ಎಸ್.ಎಲ್. ಭೈರಪ್ಪನವರ ಕಾದಂಬರಿಗಳೊಡನೆ
ಧರ್ಮ, ಕರ್ಮ, ಜಿಜ್ಞಾಸೆ, ಡಾ.ಕೆ.ಎಲ್. ಗೋಪಾಲ ಕೃಷ್ಣಯ್ಯ — ಪುಟ ಸಂಖ್ಯೆ ೧೯೮,೨೭
ಪುಟ ಸಂಖ್ಯೆ ೧೯೯,೨೮,೨೯,೩೦

***

## ಅಧ್ಯಾಯ ೬

# ದಾಟು ಕಾದಂಬರಿಯಲ್ಲಿ ಕುತಂತ್ರ ಬದುಕಿನ ಚಿತ್ರಣಗಳು

ದಾಟು ಕಾದಂಬರಿಯಲ್ಲಿ ಕಂಡುಬರುವಂತಹ ವೆಂಕಟೇಶನು ಇಂಟರ್ ಮೀಡಿಯೆಟ್ ಪರೀಕ್ಷೆಯಲ್ಲಿ ಫೇಲಾದರೂ ಆತನನ್ನು ದಡ್ಡನೆಂದು ಪರಿಭಾವಿಸುವಂತಿಲ್ಲ, ಪರೀಕ್ಷೆಯನ್ನು ಕಟ್ಟಿಕೊಂಡು ಪಾಸು ಮಾಡುವುದಕ್ಕೆ ಪ್ರಯತ್ನವನ್ನು ಪಡಲಿಲ್ಲ. ಆದರೂ ಸಹ ತುಂಬಾ ಬುದ್ಧಿವಂತನಾಗಿ ಹಣವನ್ನು ಬಾಲ್ಯದಿಂದಲೂ ಖರ್ಚುಮಾಡದೆ ಕೂಡಿಟ್ಟವನು ಆಗಿದ್ದನು. ಸಮಾಜದಲ್ಲಿ ನಾವು ಯಾವ ರೀತಿಯಲ್ಲಿ ಬದುಕಬೇಕು ಎನ್ನುವ ಯೋಚನೆಗಳನ್ನು ರೂಢಿಸಿಕೊಂಡವನು, ಆದರೆ ತನ್ನದೆ ಆದ ನಿಲುವಿನಲ್ಲಿ, ಮನಸ್ಸಿನಲ್ಲಿ, ತೋಚಿದ ಹಾಗೆ ತಿಳಿದುಕೊಂಡು ಹಣ ಸಂಪಾದನೆಯನ್ನು ಮಾಡುವುದನ್ನು ಈ ಕಾದಂಬರಿಯಲ್ಲಿ ಕಾಣಬಹುದು. ಪತ್ರಿಕೆ ಏಜೆನ್ಸಿ, ಹೋಟೆಲ್‌ಗಳ ಮಾಲೀಕನಾಗಿ ಕಂಡುಬರುತ್ತಾನೆ. ಆದರೆ, ವೆಂಕಟೇಶ್‌ನು ವಿದ್ಯಾಭ್ಯಾಸ ಮಾಡಿಕೊಂಡು ನೌಕರಿ ಸೇವೆಯಲ್ಲಿ ಕೆಲಸ ಸಲ್ಲಿಸಬೇಕೆಂಬ ನಿಲುವು ಸಹ ಈತನಿಗೆ ಇರಲಿಲ್ಲ. ಆದರೂ ದೇವರ ಪೂಜೆಯು ವಂಶಪರಂಪರ್ಯವಾಗಿ ಬಂದಿದ್ದರಿಂದ ಪೂಜೆಯನ್ನು ಮಾಡುತ್ತಿದ್ದನು. ದೇವರ ಪೂಜೆಯನ್ನು ಮಾಡುವರಿಗೆ ಜಮೀನನ್ನು ಸಹ ಕೊಟ್ಟಿದ್ದರು, ಅದರ ಜೊತೆಗೆ ಸ್ವಂತವಾದ ಭೂಮಿಯನ್ನು ಸಹ ಹೊಂದಿದ್ದನು. ಅದನ್ನು ಇವನೇ ಆಧುನಿಕವಾದ ರೀತಿಯಲ್ಲಿ ಉಳುಮೆ ಮಾಡಿ ಹೆಚ್ಚಿನ ಇಳುವರಿಯನ್ನು ಪಡೆಯಬಹುದು ಎಂಬುದನ್ನು ಈ ಕಾದಂಬರಿಯಲ್ಲಿ ಕಾಣಬಹುದು.

ಅಸಾಧ್ಯವಾದ ಕೆಲಸಗಳನ್ನು ಚಾಣಾಕ್ಷನಾದ ವೆಂಕಟೇಶನು ಜನರನ್ನು ಮರಳು ಮಾಡಿ ಆದಷ್ಟು ಬೇಗನೇ ತನ್ನ ಕಾರ್ಯವನ್ನು ಸಾಧಿಸಿಕೊಳ್ಳುತ್ತಾನೆ. ಆದ್ದರಿಂದಲೇ ಆತನು ಜನರುಗಳು ಬದುಕುವುದಕ್ಕೆ ನೂರಾರು ದಾರಿಗಳಿವೆ ಎಂದು ಹೇಳುವುದನ್ನು ಕಾಣಬಹುದು. ತನ್ನದೆ ಆದ ಕುತಂತ್ರ ಬುದ್ಧಿಶಕ್ತಿಯನ್ನು ಉಪಯೋಗಿಸಿಕೊಂಡು ಸಮಾಜದಲ್ಲಿ ಒಳ್ಳೆಯ ಹೆಸರನ್ನು ಪಡೆದುಕೊಂಡು, ಐವತ್ತು ಊರುಗಳಿಗೂ ಸಹ ಪ್ರಸಿದ್ಧನಾಗಿದ್ದಾನೆ. ಸಮಾಜದಲ್ಲಿರುವ ಜನರುಗಳು ಸಹ ವೆಂಕಟೇಶನ ಮಾತು ವೇದವಾಕ್ಯವಿದ್ದಂತೆ,

ಯಾರು ಸಹ ತಿರಸ್ಕರಿಸುವುದಿಲ್ಲ. ಎಲ್ಲರೂ ಸಹ ಒಪ್ಪಿಕೊಳ್ಳುತ್ತಾರೆ. ಆದರೆ ವೆಂಕಟೇಶ ಆದರ್ಶ ವ್ಯಕ್ತಿಯಾಗಿ ಕಂಡರೂ ಸಹ ಕುತಂತ್ರಿಯಾಗಿ ಕೆಲಸವನ್ನು ಮಾಡುವುದನ್ನು ಈ ಕಾದಂಬರಿಯಲ್ಲಿ ಕಾಣಬಹುದಾಗಿದೆ.

ವೆಂಕಟರಮಣಯ್ಯನವರ ಮಗ ವೆಂಕಟೇಶ ಮತ್ತು ಮಗಳು ಸತ್ಯಭಾಮ, ತಮಗೆ ಗೊತ್ತಿರುವ ಸಂಸ್ಕೃತ ಮತ್ತು ಪೌರಹಿತ್ಯಗಳನ್ನು ಕಲಿಸಿದವರ ಜೊತೆಗೆ ಮಗನನ್ನು ಕಾಲೇಜಿಗೂ ಸಹ ಕಳುಹಿಸಿದರು. ಆದರೆ ಮೂರು ಬಾರಿ ಪರೀಕ್ಷೆಯನ್ನು ಬರೆದರೂ ಅವನು ಇಂಟರ್ ಮೀಡಿಯೆಟ್ ಪರೀಕ್ಷೆ ಪಾಸು ಮಾಡಲಿಲ್ಲ, ಅವನು ಓದಿ ಕೆಲಸಕ್ಕೆ ಸೇರಿ ಜೀವನ ಮಾಡಬೇಕಾಗಿರಲಿಲ್ಲ, ದೇವರ ಪೂಜೆಗೆ ಬಂದಂತಹ ಜಮೀನು ಅಪಾರವಿತ್ತು, ಆದರೆ ದೇವರ ತಲೆಗೆ ಹೂವು ಹಾಕಿದರೆ ಸಾಕು ಪರಕ್ಕೆ ಮುಕ್ತಿ ಇಹಕ್ಕೆ ಅನುಕೂಲಗಳು ಆಗುತ್ತಿದ್ದವು. ಅದಲ್ಲದೆ ಪಿತ್ರಾರ್ಜಿತ ಆಸ್ತಿಯು ಸ್ವಲ್ಪವಿದೆ. ಮನೆಯಲ್ಲಿ ಅಡುಗೆ ಮಾಡುವವರು ಇರಲಿಲ್ಲ. ಆದ್ದರಿಂದ ಅವನು ಒಪ್ಪಿದಂತೆ ವಿಟ್ಟಲಾಪುರದ ಶ್ಯಾನುಭೋಗರ ಮಗಳು ಜಯಲಕ್ಷ್ಮೀಯನ್ನು ತಂದು ಮದುವೆಯಾಗಿದ್ದನು. ಮೊದಲನೆಯದು ಗಂಡು ಮಗುವಿದೆ. ಮೊದಲನೆ ಹೆರಿಗೆಗೆ ಸೊಸೆ ತವರು ಮನೆಗೆ ಹೋಗಬೇಕಾಗಿತ್ತು, ಆದರೆ ಊರಿನಲ್ಲಿ ಅಜ್ಜಿ ಮೂರು ತಿಂಗಳಿನಲ್ಲಿ ಕೆಟ್ಟ ನಕ್ಷತ್ರದಲ್ಲಿ ಸತ್ತು ಮನೆಯನ್ನು ಬಿಟ್ಟಿದ್ದಾರೆ, ಬಾಣಂತಿತನಕ್ಕೆ ಜಯಲಕ್ಷ್ಮಿ ತಾಯಿಯು ಅಳಿಯನ ಮನೆಗೆ ಬಂದಿದ್ದಾರೆ.

ವೆಂಕಟೇಶ ಇಂಟರ್ ಮೀಡಿಯಟ್ ಫೇಲಾದರೆ ದಡ್ಡನಲ್ಲ, ಮದುವೆಯಾಗಿದ್ದರಿಂದ ಫೇಲಾದನೆಂದು ಕೆಲವು ಜನರು ಹೇಳುತ್ತಾರೆ. ಆದರೆ ಅವನ ತಂದೆಗೂ ಆ ಮಾತಿನಲ್ಲಿ ಸ್ವಲ್ಪ ನಿಜವೇಕಾಣಿಸುತ್ತಿತ್ತು. ಆದದ್ದಾಯಿತು. ಜೀವನಕ್ಕೆ ದಾರಿ ಇರುವಾಗ ಪಾಸು ಮಾಡಿದರೆ ಏನಾಗಬೇಕಿತ್ತು? ಎಂದು ಸುಮ್ಮನಾದರು. ಹಣಕಾಸನ್ನು ಸಹ ಎಂದು ಹಾಳು ಮಾಡಿದನಲ್ಲ. ಊರಿಗೆ ಬಂದಾಗ ದೇವಸ್ಥಾನದ ಪೂಜೆಯನ್ನು ತಂದೆಯವರು ಮಾಡುತ್ತಾರೆ. ತಂದೆಗಿಂತಲು ಹೆಚ್ಚು ಆಸಕ್ತಿ ವಹಿಸಿ ಉಳಿಮೆ ಮಾಡಿಸುತ್ತಾನೆ, ಸೀಮೆಗೊಬ್ಬರವನ್ನು ಹಾಕಿ ಜಪಾನ್ ಮಾದರಿಯ ಬತ್ತ ಬೆಳೆಯುತ್ತಾನೆ. ಕೋಟೆಯ ಬಾಗಿಲಿನ ಹೊರಗೆ ಬಸ್ ನಿಲ್ದಾಣದ ಎದುರಿಗೇ ಹೋಟೆಲು ಕಟ್ಟಿಸಿದ್ದಾನೆ. ಇವನ ಮಾಲಿಕತ್ವದಿಂದಲೆ ಹೋಟೆಲು ನಡೆಯುತ್ತಿದೆ. ಆದರೆ ವಾಸ್ತವವಾಗಿ ಪ್ರತಿಯೊಂದು ಜವಾಬ್ದಾರಿಯು ಉಡುಪಿಯ ಬ್ರಾಹ್ಮಣನದು, ಜಾಗ, ಕಟ್ಟಡ, ಪಾತ್ರೆ ಮತ್ತು ಪೀಠೋಪಕರಣಗಳು ಇವನವು. ಅವನಿಗೆ ಬೇಕಾದ ಸಂಪಾದನೆ ಮಾಡಬಹುದು. ಆದರೆ ಇವನಿಗೆ ದಿನಕ್ಕೆ ಹದಿನೈದು ರೂಪಾಯಿಯಂತೆ ಕೊಡಬೇಕು. ಅದಲ್ಲದೆಯು ಸಹ ಕನ್ನಡ ಪತ್ರಿಕೆಗಳ ಊರಿನ ಏಜೆನ್ಸಿಯು ಶ್ರೀನಿವಾಸನದೇ. ಊರಿನಲ್ಲಿ ಆಗುವ ಸಾರ್ವಜನಿಕ ಸಮಾರಂಭಗಳು, ಮುಖ್ಯರ ಮನೆಯ ಮದುವೆ, ಮರಣ ಮೊದಲಾದವುಗಳ ಸುದ್ದಿಗಳನ್ನು

ಪತ್ರಿಕೆಗಳಲ್ಲಿ ಬರೆಯುತ್ತಾನೆ. ಒಟ್ಟಿನಲ್ಲಿ ಹೇಳಬೇಕಾದರೆ ಇಪ್ಪತ್ತೈದನೆಯ ವಯಸ್ಸಿಗೇ ಸುತ್ತ ಮುತ್ತಲಿರುವ ಐವತ್ತು ಊರುಗಳ ಜನರಲ್ಲಿ ಹೆಸರನ್ನು ಸಂಪಾದಿಸಿದ್ದಾನೆ.

ವೆಂಕಟೇಶ ತುಂಬಾ ಚಾಣಾಕ್ಯನಾಗಿದ್ದರೂ ದೊಡ್ಡ ನಗರದಲ್ಲಿ, ಅದೂ ತನ್ನ ತಂಗಿಗಿಂತ ಹೆಚ್ಚು ಅಥವಾ ಅವಳಷ್ಟೆ ಓದಿರುವವನ ಜೊತೆಗೆ ವ್ಯವಹರಿಸುತ್ತಿದ್ದನು. ನಾಮಕರಣ ಸಮಾರಾಧನೆಯಲ್ಲಿ ನಾಯಕನಾಗಿ ಕೆಲಸ ಮಾಡುತ್ತಿದ್ದ. ನಿಧಾನವಾಗಿ ಊಟವನ್ನು ಮಾಡಬೇಕು ಎಂದು, ಉಪಚಾರದ ಮಾತುಗಳನ್ನು ಆಡುತ್ತಾ ಪಂಕ್ತಿಗಳ ಮಧ್ಯೆ ತಿರುಗಾಡುತ್ತಿದ್ದನು. ಅವನು ಒಳ್ಳೆಯ ಬಟ್ಟೆಗಳನ್ನು ಹಾಕಿಕೊಂಡು ಲಕ್ಷಣವಾಗಿ ಕಾಣುತ್ತಿದ್ದನು. ಊಟದಲ್ಲಿಯು ಸಹ ಎಲ್ಲರ ಮೆಚ್ಚುಗೆಯನ್ನು ಪಡೆದಿದ್ದನು. ಸತ್ಯಭಾಮಳ ಕಾಗದವನ್ನು ನೋಡಿ ಅಪ್ಪ ತಾಳ್ಮೆಯನ್ನು ತಂದುಕೊಳ್ಳದಿದ್ದರೆ ನಮ್ಮ ಮರ್ಯಾದೆಯನ್ನು ಹಾಳು ಮಾಡುತ್ತಾಳೆ. ನಾನು ಹೇಳುವ ತನಕ ಯಾರ ಹತ್ತಿರ ವಿಷಯ ಮಾತನಾಡಬಾರದು ಎಂದು ದೇವರ ಮೇಲೆ ಆಣೆ ಮಾಡಿದನು, ಎಲ್ಲ ಜನರುಗಳು ಒಂದೆಡೆ ಸೇರಿ ಕುಳಿತಾಗ ಯಜಮಾನರೆಲ್ಲಿ ಎಂದು ವೆಂಕಟೇಶನನ್ನು ಕೇಳಿದರು. ಆದರೆ ಅವರು ತೋಟದಲ್ಲಿ ಕಳ್ಳರು ಬೇಲಿಯನ್ನು ಹಾರಿ ಕಾಯಿ ಕೆಡವುತಿದ್ದಾರೆ, ಎಂದು ತೋಟವನ್ನು ನೋಡುವುದಕ್ಕೆ ಹೋದರು, ತಂದೆಯು ಬ್ರಾಹ್ಮಣರು ಊಟವನ್ನು ಮಾಡದೆ ಯಾರು ಸಹ ಊಟವನ್ನು ಮಾಡುತ್ತಿಲ್ಲ. ಆದ್ದರಿಂದ ಯೋಚನೆ ಮಾಡುತ್ತಾ ಕುಳಿತಿದ್ದ ತಂದೆಯವರ ಹತ್ತಿರ ಬಂದನು.

ಸತ್ಯಭಾಮಳು ಯಾರ ಮಾತನ್ನು ಕೇಳುವುದಿಲ್ಲ, ತನ್ನದೆ ಆದ ದಾರಿಯಲ್ಲಿ ನಡೆಯುತ್ತಾಳೆ. ಆರೋಗ್ಯ ಸರಿ ಇಲ್ಲವೆ ಎಂದು ಕೇಳಿದ ವ್ರತ, ಪೂಜೆ, ಪುರಸ್ಕಾರ ಮಾಡಿದ ಮೇಲೆ ಜನಗಳು ಮಾಡಿದ ಪದಾರ್ಥಗಳನ್ನು ತಿನ್ನಬಾರದು ಅಲ್ವೆ ಅದರಲ್ಲಿಯು ಸಹ ಮೈಲಿಗೆಯನ್ನು ಸೂಚಿಸುವಂತಿತ್ತು. ಆದರೆ ವೃದ್ಧ ಪಟೇಲರು ಬ್ರಾಹ್ಮಣರ ಶ್ರೇಷ್ಠತೆಯನ್ನು ಇಷ್ಟಪಡುತ್ತಿದ್ದರು. ಆದರೂ ಇವರು ಬ್ರಾಹ್ಮಣರಿಗಿಂತಲೂ ನಾವು ಶ್ರೇಷ್ಠರು ಎನ್ನುತ್ತಿದ್ದರು. ನೀವು ಮಾಡುವ ಧ್ಯಾನಗಳನ್ನು ನಾನು ಮಾಡುವುದಿಲ್ಲವೆಂದು ವೆಂಕಟೇಶ ಹೇಳಿದ ಮೇಲೆ ಅವರಿಗೆ ಸಂತೋಷವಾಯಿತು. ಬ್ರಾಹ್ಮಣರು ಪೂಜೆ ಮಾಡುವುದಕ್ಕೆ ಮಾತ್ರ ಸೀಮಿತವಾಗಿದ್ದರು, ನನ್ನ ಮಾತನ್ನು ಕೇಳುವುದಿಲ್ಲ, ವೆಂಕಟೇಶನು ಎಲ್ಲರೂ ಒಂದೇ ಎಂದು ಮೇಲು ಕೀಳು ಭಾವನೆಯನ್ನು ಮಾಡುವುದಿಲ್ಲ. ಚುನಾವಣೆಯಲ್ಲಿ ಬೋರ್‌ನಿಂಗಪ್ಪಾರನ್ನು ಗೆಲ್ಲಿಸುವ ಪ್ರಯತ್ನವನ್ನು ಮಾಡುತ್ತೇವೆ, ನಮ್ಮ ಮತಗಳನ್ನು ಸಹ ಅವರಿಗೆ ಚಲಾಯಿಸಬೇಕು, ಎಂದರು. ಚುನಾವಣೆಯಲ್ಲಿ ನಿಲ್ಲುವ ಅಭ್ಯರ್ಥಿಗಳು ಒಂದು ಕಡೆಯಾದರೆ, ಇನ್ನೊಂದು ಕಡೆಯಲ್ಲಿ ನಿಂತಿರುವ ಅಭ್ಯರ್ಥಿಗಳಿಗೆ ಜೇಕಾರ ಮಾಡಿರುವ ಜನಗಳು ಇನ್ನೊಂದು ಗುಂಪಿನಲ್ಲಿರುತ್ತಾರೆ. ಆದರೆ ನಾನು ಎರಡನೇ ಗುಂಪಿಗೆ ಸೇರುತ್ತೇನೆ ಎಂದನು. ಹಾಲನ್ನು ಕುಡಿಯುವುದೆಂದರೆ ಮಾತನ್ನು ಕೊಟ್ಟು ಅವರಿಗೆ ಋಣಿಯಾಗಿರುತ್ತೇನೆ.

ಸತ್ಯಭಾಮಳ ವಿವಾಹವು ಶ್ರೀನಿವಾಸನ ಜೊತೆಯಲ್ಲಿ ಆಗಲಿಲ್ಲವಾದ್ದರಿಂದ ವೆಂಕಟೇಶನಿಗೆ ಭಾರ ಕಡಿಮೆಯಾಯಿತು. ಆದರೆ ಅವನಿಗೆ ಕುಮುದಿನಿಯೊಂದಿಗೆ ಬೇರೆ ವಿವಾಹವು ಆಗುತ್ತದೆ. ಎಂದು ತಿಳಿದುದರಿಂದ ಬೇಸರವಾಯಿತು. ಆ ಮದುವೆ ನನಗೆ ಮತ್ತು ನಮ್ಮ ಮನೆತನಕ್ಕೆ ಆಗುತ್ತಿರುವ ಅವಮಾನವೆನಿಸಿತು. ಆದರೆ ಒಂದು ತಿಂಗಳಿನಲ್ಲೆ ಸತ್ಯಭಾಮಳಿಗೆ ಓದಿರುವ ಹುಡುಗನನ್ನು ಹುಡುಕಿ, ವಿಜೃಂಭಣೆಯಿಂದ ವಿವಾಹವನ್ನು ಮಾಡಬೇಕೆಂದು ವೆಂಕಟೇಶನ ಮನಸ್ಸಿನಲ್ಲಿ ಯೋಜನೆಗಳು ಶುರುವಾದವು. ಸತ್ಯಭಾಮಳು ಮದುವೆಗೆ ಒಪ್ಪುತ್ತಾಳೆಯೇ? ಮರ್ಯಾದೆಯನ್ನು ಕಳೆದುಕೊಂಡಿದ್ದರಿಂದ ಒಪ್ಪಲೇಬೇಕು. ತುಮಕೂರಿನ ಲಿಂಗಯ್ಯನವರನ್ನು ಮಾತಾನಾಡಿಸಿದರೆ ಎಲ್ಲಾದರೂ ಒಳ್ಳೆಯ ಗಂಡನ್ನು ತೋರಿಸಿಕೊಡುತ್ತಾರೆ. ಈ ಮಾತನ್ನು ಅಪ್ಪನ ಹತ್ತಿರ ಹೇಳಬೇಕು. ಆದರೆ ಅವರನ್ನು ಕೇಳಿದರೆ ಜ್ವರ ಬಂದವರಂತೆ ಇರುತ್ತಾರೆ. ಆದ್ದರಿಂದಲೇ ಅವರು ನಿನಗೆ ಏನು ತಿಳಿಯುತ್ತೆ ಹಾಗೆ ಮಾಡು ಎನ್ನುತ್ತಾರೆ.

ವೆಂಕಟರಮಣಯ್ಯನವರು ನಡೆದಿರುವ ಘಟನೆಗಳನ್ನು ಮನಸ್ಸಿನಲ್ಲೆ ನೆನಪಿಸಿಕೊಂಡು ಅವರೇ ಮಾತನಾಡುತ್ತಿದ್ದರು. ವೆಂಕಟೇಶನೆ ತಂಗಿಯ ಹತ್ತಿರ ಮಾತನಾಡಬೇಕೆಂದೂ ಬೆಂಗಳೂರಿಗೆ ಹೋದರು, ಕಾಲೇಜಿನ ಕಛೇರಿಯಲ್ಲಿ ಮಾತನಾಡಿಸಿದಾಗ ಕಾಲೇಜನ್ನು ಬಿಟ್ಟು ಮೂರು ತಿಂಗಳಾಯ್ತು ಎಂದರು. ಯಾಕೆ ಬಿಟ್ಟಳು ಎಂದು ಕೇಳಿದಾಗ ಕಾಲೇಜಿನ ಕಮಿಟಿಯವರು ತೆಗೆದು ಹಾಕಿದರು ಎಂದು ಹೇಳಿದನು. ಏಕೆ ಎಂದಾಗ ಅವರಿಗೇನಾಬೇಕು? ಎಂದು ಪ್ರತಿಯಾಗಿ ಕೇಳಿದರು. ವೆಂಕಟೇಶನು ಮಾತನಾಡುತ್ತಾ ಸತ್ಯಭಾಮಳನ್ನು ಜಂಬದವಳು ಸಿಕ್ಕಿದರೂ, ತನ್ನ ಮಾತನ್ನು ಕೇಳುವುದಿಲ್ಲ ಎಂದು ವಾಪಸ್ಸು ಊರಿಗೆ ಬಂದನು. ವೆಂಕಟೇಶನನ್ನು ಮೇಲಗಿರಿಗೌಡರು ಕರೆಯುತ್ತಿದ್ದಾರೆ ಎಂದು ಮನೆಯ ಆಳುಗಳು ಕರೆದುಕೊಂಡು ಹೋದನು. ಮದುವೆಯ ಶ್ರೀನಿವಾಸನನ್ನು ಮಾಡಬೇಕು ಎಂದರು. ಆದರೆ ವೆಂಕಟೇಶನು ನಂದೇನಿಲ್ಲ, ಎಲ್ಲವೂ ನಿಮ್ಮದೆ ಎಂದನು. ಅದಕ್ಕೆ ಮೇಲಗಿರಿಗೌಡರು ಚುನಾವಣೆಯ ವಿಚಾರವು ಇವನಿಗೆ ತಿಳಿದಿದೆ. ಎಂದುಕೊಂಡರು. ಮದುವೆಯ ಊಟದ ವಿಚಾರಗಳನ್ನು ಕುರಿತು ಮಾತನಾಡಿದರು. ವೆಂಕಟೇಶನು ಮುಜುರಾಯಿ ಇಲಾಖೆಯಿಂದ ಕೆಲಸ ಮಾಡಿಸಿ ಎಂದನು. ವೆಂಕಟೇಶನ ಅಪ್ಪನಿಗೆ ವಯಸ್ಸಾಗಿರುವುದರಿಂದ ಪೂಜೆ ಮಾಡುವುದು ಕಷ್ಟವಾಗಿದೆ. ನಿನ್ನ ಪಾಡಿಗೆ ಸುಖವಾಗಿ ಮನೆಯಲ್ಲಿ ಇರಬೇಕು. ದೇವಸ್ಥಾನವು ಹಲವಾರು ಜನರಿಗೆ ಸೇರಿರುವ ಗುಡಿಯಾಗಿದೆ. ಅಪ್ಪದೇವರ ಹತ್ತಿರ ಅರಿಕೆ ಮಾಡಿಕೊಂಡಿದ್ದಾನೆ.

ವೆಂಕಟರಮಣಯ್ಯನವರ ಅರಿಕೆಯನ್ನು ದೇವರು ನೆರವೇರಿಸಲಿಲ್ಲ ಆದ್ದರಿಂದ ಅವರು ಪೂಜೆ ಮಾಡುವುದು ಒಂದು ಸುಳ್ಳು ಕಸುಬು. ಅದರ ಬದಲು ಏನಾದರೂ ಕೆಲಸ ಮಾಡಿಕೊಂಡು ಇರಬೇಕು. ವೆಂಕಟೇಶನಿಗೆ ದೇವಸ್ಥಾನದ ಕೀಯನ್ನು ಕೊಟ್ಟರು. ಅದಕ್ಕೆ ವೆಂಕಟೇಶನು ಪೂಜೆಯನ್ನು ಬಿಡುವುದು

ದಡ್ಡರು ಮಾಡುವ ಕೆಲಸವೆಂದು, ಯಾರಾದರೂ ಒಬ್ಬ ಅರ್ಚಕನನ್ನು ಪೂಜೆಗೆ ನೇಮಕ ಮಾಡಬೇಕು ಎಂದು ಹೇಳಿದನು. ಆದರೆ ವೆಂಕಟೇಶನಿಗೆ ಮಂತ್ರವನ್ನು ಹೇಳಿಕೊಂಡು ಪೂಜೆ ಮಾಡುವುದು ಕಷ್ಟವಾಗುತ್ತಿತ್ತು. ತನ್ನ ಗೌರವವು ಸಹ ಸಮಾಜದಲ್ಲಿ ಉಳಿಯುವುದಿಲ್ಲ. ಆದರೆ ಪುರೋಹಿತ, ಪೂಜಾರಿಗೆ ಸಮಾಜದ ಎಲ್ಲಾ ಜನರಿಂದಲೂ ತಿರಸ್ಕಾರವಿದೆ ಎಂದು ಹೇಳಿದನು. ಶ್ರೀನಿವಾಸನ ಹೆಂಡ್ತಿ ಕುಮುದಿನಿ, ರಂಗಮ್ಮನ ಮಾವ ತಿರುಮಲೇಗೌಡ ಕುಲದೇವರಿಗೆ ಅಭಿಷೇಕ ಮಾಡಿಸುವುದಕ್ಕೆ ದೇವಸ್ಥಾನಕ್ಕೆ ಬಂದರು. ಶಾಮಣ್ಣನವರು ಅರ್ಚಕತ್ವ ವಹಿಸಿಕೊಂಡು, ವೆಂಕಟೇಶ ಮಂತ್ರವನ್ನು ಹೇಳಿ ದೇವರಿಗೆ ಪೂಜೆಯನ್ನು ಮಾಡಿದರು. ಅಭಿಷೇಕ, ಮಹಾಮಂಗಳಾರತಿಯನ್ನು ಮೇಲಗಿರಿಗೌಡರ ಮನೆಯವರು ಪೂಜೆಯನ್ನು ಮಾಡಿಸಿದರು. ಹೊರಗಡೆ ಬಂದು ವೆಂಕಟೇಶನೆ ನಮ್ಮ ಮನೆಯ ಪುರೋಹಿತರು ಎಂದು ಹೇಳಿ ಬೇಟಿ ಮಾಡಿಸಿದರು.

ವೆಂಕಟರಮಣಯ್ಯನವರು ತೋಟದಲ್ಲಿ ಗುಡಿಸಲು ಕಟ್ಟುವುದಕ್ಕೆ ಕರೆದುಕೊಂಡು ಹೋದರು, ವೆಂಕಟೇಶನು ದೇವಸ್ಥಾನದಿಂದ ಬಂದ ಮೇಲೆ ತೋಟದಲ್ಲಿ ಏಕೆ ಗುಡಿಸಲು ಕಟ್ಟಲು ಹೇಳಿದೆ ಎಂದು ತಂದೆಯನ್ನು ಕೇಳಿದನು, ಅದಕ್ಕೆ ಅವರು ಇನ್ನೂ ಮೇಲೆ ಅಲ್ಲೆ ವಾಸ ಮಾಡುತ್ತೇನೆ ಎಂದು ಹೇಳಿದರು. ಒಂದು ದಿನ ವೆಂಕಟರಮಣಯ್ಯನವರು ಕೊಳದಲ್ಲಿ ಸ್ನಾನ ಮಾಡುವಾಗ ಜನಿವಾರವನ್ನು ತೆಗೆದು ಕೊಳದ ಕಟ್ಟೆಯ ದಡದಲ್ಲಿ ಇಟ್ಟಿದ್ದರು. ಇದನ್ನು ನೋಡಿದ ವೆಂಕಟೇಶ ಇದೇನಪ್ಪ ಜನಿವಾರ ತೆಗೆದಿಟ್ಟಿದೀಯ? ಹೀಗೆ ಮಾಡಬಹುದೇ ಎಂದು ಕೇಳಿದಾಗ, ಅವರು ಅದರಲ್ಲೇನಿದೆ, ಆರಳೆ ನೂಲಿನದಾರ ಎಂದರು ಜನಿವಾರ ಪವಿತ್ರವೆಂದು ಕಾಪಾಡಿಕೊಂಡು ಬಂದ ಇವರಿಗೆ ಬುದ್ದಿಭ್ರಮಣೆಯಾಗಿರಬಹುದೇ? ಎಂದು ಅನುಮಾನಪಟ್ಟನು. ವೆಂಕಟರಮಣಯ್ಯನವರು ಈಗ ಶಾಸ್ತ್ರ ಸಂಬಂಧಗಳನ್ನು ತೊರೆದಿದ್ದಾರೆ. ಬರುಬರುತ್ತಾ ವೆಂಕಟರಮಣಯ್ಯನವರ ದಿನಚರಿಯನ್ನು ಗಮನಿಸಿದಾಗ ಅವರಿಗೆ ಹುಚ್ಚು ಹಿಡಿದಿದೆ ಎಂದು ದುಃಖವನ್ನು ವ್ಯಕ್ತಪಡಿಸಿದನು.

ಹುಚ್ಚು ಹಿಡಿದವರಿಗೆ ನಿಂಬೆಹಣ್ಣನ್ನು ತಿಕ್ಕಿ ತಣ್ಣೀರು ಹಾಕುತ್ತೀನಿ ಎಂದು ತಂದೆಯನ್ನು ವೆಂಕಟೇಶನು ಕರೆದನು, ಆದರೆ ವೆಂಕಟರಮಣಯ್ಯನವರು ನಾನು ಚೆನ್ನಾಗಿದ್ದೀನಿ, ನಿನ್ನ ಕೆಲಸ ನೋಡು, ಬಂದು ನನ್ನನ್ನು ಪೀಡಿಸಬೇಡವೆಂದು ಹೇಳಿದರು. ತೆಂಗಿನ ತೋಟದಲ್ಲಿ ಕಾಯಿಕಳ್ಳರು ಹೆಚ್ಚಾಗಿರುವುದರಿಂದ ಅಪ್ಪನವರು ತೋಟದಲ್ಲಿರುತ್ತಾರೆ. ಅವರು ಕಷ್ಟಪಟ್ಟು ಬೆಳೆದಿರುವುದರಿಂದ ಒಂದು ಬುರುಡೆಯು ಕಳ್ಳನ ಕೈಗೆ ಸಿಕ್ಕಬಾರದು. ಎಂದು ಹಗಲು ರಾತ್ರಿಯೆನ್ನದೆ ಇಲ್ಲೆ ಇರ್ತಿನಿ ಎಂದು ವೆಂಕಟೇಶನು ಕೇಳಿದವರಿಗೆ ಹೇಳುತ್ತಾನೆ. ಆದರೆ ವೆಂಕಟರಮಣಯ್ಯನವರು ತೋಟವನ್ನು ಬಿಟ್ಟು ಊರೊಳಕ್ಕೆ ಬರುವುದಿಲ್ಲ. ಅಡುಗೆ ಸಾಮಾನುಗಳೆಲ್ಲವನ್ನು ತೆಗೆದುಕೊಂಡು ಹೋಗಿ ಗುಡಿಸಲಿನಲ್ಲಿ

ವೆಂಕಟೇಶ ಇಡುತ್ತಾನೆ. ಅವರ ಆಳುಸಹ ಪ್ರತಿದಿನವೂ ಹಾಲನ್ನು ಸಹ ಕೊಟ್ಟುಬರುತ್ತಾನೆ. ಅವರು ಏನಾದರೂ ಅಡಿಗೆ ಮಾಡಿಕೊಂಡು ತಮ್ಮ ಮಟ್ಟಿಗೆ ತಾವು ಇದ್ದುಬಿಡುತ್ತಾರೆ. ವೆಂಕಟರಮಣಯ್ಯನವರು ಹೋಲೆಗೆರಿಗೆ ಹೋದ ವಿಷಯವನ್ನು ತಿಳಿದುಕೊಂಡು, ವೆಂಕಟೇಶ ಅಪ್ಪನ ಹತ್ತಿರ ಬಂದು ಅಲ್ಲಿಗ್ಯಾಕೆ ಹೋದೆ? ಅದು ಹೊಲೆಯಕೇರಿ ಹೀಗೆ ಮಾಡಬಾರದೆಂದು ಅಂತ ತಿಳೀಲಿಲ್ವೆ? ಎಂದು ಕೇಳಿದಕ್ಕೆ ವೆಂಕಟರಮಣಯ್ಯ ಮಾತನಾಡಲಿಲ್ಲ.

ವೆಂಕಟೇಶ ಸತ್ಯಭಾಮಳ ಮುಖವನ್ನು ನೋಡಿದ ಮೇಲೆ ತೋಟದ ಗುಡಿಸಲಿಗೆ ಹೋದರೆ ಅಪ್ಪ ನನ್ನನ್ನು ಕಂಡ್ರೆ ನಾಗರಹಾವಿನ ಹಾಗೆ ಕೂಗಾಡುತ್ತಾನೆ. ನೀನು ತೋಟದ ಹೊಳೆ ಬಾಗಿಲ ಒಳಗೆ ಕಾಲಿಟ್ಟರೆ ಕಾಲನ್ನು ಕಡಿದು ಹಾಕಿ ಬಿಡುತ್ತೇನೆ ಎಂದು ಹೇಳಿದರು. ಜಯಮ್ಮನು ಸತ್ಯಭಾಮಳಿಗೆ ನಡೆದಿರುವ ಎಲ್ಲಾ ವಿವರವನ್ನು ಹೇಳಿ ಎಂದು ವೆಂಕಟೇಶನಿಗೆ ಹೇಳಿದಳು. ಆದರೆ ಸತ್ಯಭಾಮೆಯು ಊರಿಗೆ ಬಂದಿರುವುದರಿಂದ ಎಲ್ಲರು ಸಹ ಆಕೆಯನ್ನು ನೋಡಲು ಬಂದಿದ್ದರು. ಅದಕ್ಕೆ ವೆಂಕಟೇಶನು ಯಾರ ಹತ್ತಿರವು ಹಣ ವಸೂಲಿ ಮಾಡುತ್ತಿಲ್ಲ. ಒಳಗಡೆಯಲ್ಲಿ ಕರಡಿಯನ್ನು ಕುಣಿಸುತ್ತಿದ್ದೇವೆ ಬನ್ನಿ ಎಂದು ಕರೆದನು. ಈ ಮಾತನ್ನು ಕೇಳಿ ಬಂದವರಿಗೆ ಬೇಸರವಾಯಿತು. ರಾತ್ರಿಯಾಗಿದ್ದರೂ ಕೈಲಿ ಟಾರ್ಚ ಹಿಡಿದು, ವೆಂಕಟೇಶನನ್ನೂ ಜೊತೆಗೆ ಕರೆದುಕೊಂಡು ಸತ್ಯಭಾಮ ತೋಟದ ಗುಡಿಸಲಿಗೆ ಬಂದಳು ''ಓಂ, ಸಮಿಧಾಯ ಶೋಚಯೇ ಘೃತಂ''[೧] ಎಂದು ಮಂತ್ರಹೇಳಿಕೊಂಡು, ಹೋಮ ಮಾಡುತ್ತಿದ್ದ ವೆಂಕಟರಮಣಯ್ಯ ಸತ್ಯಭಾಮೆಯನ್ನು ಒಳಗೆ ಬಂದು ಕುಳಿತುಕೊಳ್ಳುವಂತೆ ಹೇಳಿದರಾದರೂ ವೆಂಕಟೇಶ ಬಂದ ಎಂದ ತಕ್ಷಣವೇ ಹವನದಲ್ಲಿ ಉರಿಯುತ್ತಿದ್ದ ಒಂದು ಹೋಳಕೆಯ ತುದಿಯನ್ನು ಹಿಡಿದು ಗುಡಿಸಲಿನ ಹೊರಗೆ ನುಗ್ಗಿದರು. ವೆಂಕಟೇಶನು ಕಂಗಾಲಾಗಿ ಓಡಿಹೋದನು.

ವೆಂಕಟೇಶನು ದನದ ಕೊಟ್ಟಿಗೆಗೆ ಬಂದು ಸತ್ಯಭಾಮೆಗೆ ನೀನ್ಯಾಕೆ ಪೋಲಿಸ್ ಸ್ಟೇಷನ್‌ಗೆ ಹೋಗಿದ್ದೆ ಎಂದು ಕೇಳಿದನು, ಅದಕ್ಕೆ ಸತ್ಯಭಾಮಳು ಬೆಟ್ಟಯ್ಯನವರು ಕರೆದರು ಎಂದಾಗ, ಆ ಬೋಳೀ ಮಗುಂಗೆ ಕಷ್ಟ ಬಂತು, ಎಂದು ನೀನು ಹೋದೆ? ಈ ಊರಿನ ಜನರೆಲ್ಲ ಕುಂಕುಮ ಇಟ್ಟುಕೊಳ್ಳುವ ಹೆಂಗಸರು, ತಾನೊಬ್ಬನೇ ಗಂಡಸು ಎಂದು ಹೊರಜಿ ಮೀಸೆ ಬೆಳೆಸಿದ್ದಾನೆ. ನಮ್ಮ ಹೋಟೆಲಿಗೆ ಮೋಹನದಾಸ ಬರುತ್ತೇನೆಂದು ಬಸ್‌ನಿಲ್ದಾಣದಲ್ಲಿ ನಿಂತುಕೊಂಡು ಕೆಮ್ಮುತ್ತಾ ಹೇಳುತ್ತಿದ್ದನು. ಆದರೆ ಒಂದು ಸಲ ಜಗಳವನ್ನು ಮಾಡಿಕೊಂಡು ಹೋಟೆಲಿನೊಳಕ್ಕೆ ಬಂದಾಗ ತುಟಿ ಹರಿದು ಹೋಗುವಾಗೆ ಹೋಡೆದಿದ್ದರು. ನೀನು ಹೇಳಿದ ಮಾತುಗಳನ್ನು ಕಾಗದಲ್ಲಿ ಬರೆದಿರುವ ಪತ್ರವನ್ನು ವಾಪಸು ತೆಗೆದುಕೊಂಡು ಬೇರೆ ರೀತಿಯಲ್ಲಿ ಬರೆದು ಕೊಡು ಎಂದನು. ಆದರೂ ಸಹ ಸತ್ಯಭಾಮಳು ಸುಮ್ಮನಿದ್ದಾಗ ನಿನಗೆ ಕಿವಿ ಕೇಳಿಸುವುದಿಲ್ಲ ಎಂದನು, ಸತ್ಯಭಾಮಳು ಸಹ ನಿಜವನ್ನೇ ಬರೆದುಕೊಟ್ಟಿದ್ದೇನೆ ಎಂದಳು.

ಮೋಹನದಾಸನಿಗೆ ಶಿಕ್ಷೆ ಆಗಬೇಕೆಂದು ವೆಂಕಟೇಶನಿಗೆ ಊರಿನವರೆಲ್ಲ ಜನರುಗಳು ಹೇಳಿದರು. ಇನ್ನ್ಯಾವತ್ತಾದರೂ ತಪ್ಪುಮಾಡಬಾರದೆಂದು ಆತನಿಗೆ ಅರ್ಥವಾಗಬೇಕು ಎಂದರು. ಸತ್ಯಭಾಮಳು ಕೊಳ್ಳದ ಹತ್ತಿರ ಒಬ್ಬಳೆ ಇರುವುದರಿಂದ ಅಪ್ಪನಾಗಿ ನಿನಗೂ ಹುಚ್ಚು ಹಿಡಿಯಿತು ಎಂದು ವೆಂಕಟೇಶನು ಕೇಳಿದ್ದನು. ಕೊಳ್ಳದ ಹತ್ತಿರ ಇರಬೇಕು, ಅನ್ನಿಸಿದ್ದರಿಂದ ಇದ್ದೇನೆ ಅಷ್ಟೆ ಎಂದಳು. ಆದರೆ ವೆಂಕಟೇಶನು ಎಲ್ಲವೂ ಶಿವಲೀಲೆ ಎಂದುಕೊಂಡು ಅಪ್ಪನ ತಿಥಿಯ ವಿಷಯವನ್ನು ಮಾತನಾಡಿದ. ಅಪ್ಪನ ತಿಥಿಯ ಸಾಮಾನುಗಳನ್ನು ತರುವುದಕ್ಕಾಗಿ ತುಮಕೂರಿಗೆ ಹೋಗುತ್ತಿರುವುದಾಗಿಯೂ, ಅಪ್ಪನ ಗುಡಿಸಲಿನಲ್ಲಿ ಇಟ್ಟಿರುವ ಎರಡು ಸಾವಿರ ರೂಪಾಯಿಗಳನ್ನು ಕೊಡಬೇಕೆಂದೂ ಕೇಳಿದ. ಆದರೂ ಮನೆಯ ಹತ್ತಿರ ಬಂದು ಜವಾಬ್ದಾರಿಯಿಂದ ಕೆಲಸ ಮಾಡು ಎಂದು ಸತ್ಯಭಾಮಳಿಗೆ ಹೇಳಿದನು. ಅದಕ್ಕೆ ಸತ್ಯಭಾಮಳು ಮೂರು ಉಂಡೆಯನ್ನು ಅನ್ನ ಮಾಡಿ ದರ್ಬೆಯ ಮೇಲಿಟ್ಟು ಮಂತ್ರವನ್ನು ಹೇಳಿದಾಗ ಅವನಿಗೆ ಸೇರುತ್ತದೆ ಅಂತೀಯ? ಸತ್ತ ಮೇಲೆ ಆತ್ಮ ಎನ್ನುವುದು ಇದೆಯೋ ಇಲ್ಲವೋ? ಇದ್ದರೆ ಏನಾಗುತ್ತೋ, ಎಲ್ಲಿಗೆ ಹೋಗುತ್ತೋ ಬಲ್ಲವರ್ಯಾರು? ಎಂದು ಕೇಳಿದನು. ಆದ್ದರಿಂದಲೇ ನಾಲ್ವರೂ ಜನರುಗಳಿಗೆ ಅನ್ನವನ್ನು ಹಾಕಬೇಕು ಎನ್ನಿಸುತ್ತದೆ.

ಸತ್ಯಭಾಮಳ ಮದುವೆಯ ವಿಚಾರವನ್ನು ವೆಂಕಟೇಶನು ಕೇಳಿದನು. ಆಕೆಯು ಬೇಡ ನಾನು ಹೀಗೆಯೆ ಇರುತ್ತೇನೆ ಎಂದಳು. ಆದರೆ ಶ್ರೀನಿವಾಸ ಎಲ್ಲಾ ಹಳ್ಳಿಗಳಿಗೂ ಬಸ್‌ಲೈನಿನ ವ್ಯವಸ್ಥೆ ಮಾಡಿಕೊಂಡು ಸುಖವಾಗಿದ್ದಾನೆ ಎಂದು ಹೇಳುತ್ತಾ, ರಾಜಕೀಯವು ಜೀವನಕ್ಕೆ ಅವಶ್ಯಕವೆಂದನು. ಶ್ರೀನಿವಾಸನ ಮನೆಯಲ್ಲಿ ಹಾರುವರ ಹೆಂಗಸರು ಮುಸುರೆಯನ್ನು ತಿಕ್ಕಬೇಕು ಎಂಬ ಕನಸನ್ನು ಕಂಡಿದ್ದಾನೆ. ಸತ್ಯಭಾಮಳು ಮಾತಂಗಿಗೆ ಎರಡು ಸಾವಿರ ರೂಗಳನ್ನು ಕೊಟ್ಟಿದ್ದೇನೆ ಎಂದಾಗ, ಅಪ್ಪನ ಜೊತೆ ಲೈಂಗಿಕ ಅಪೇಕ್ಷೆಯನ್ನು ತೀರಿಸಿಕೊಳ್ಳಲು ಸಂಬಂಧ ಮಾಡಿದ್ದಾಳೆ ಎಂದು ಹೇಳಿದನು. ಆದರೆ ಸತ್ಯಭಾಮಳಿಗೆ ವೆಂಕಟೇಶನು ವ್ಯವಹಾರ ಮಾಡುವುದಕ್ಕೆ ಅಧಿಕಾರ ಕೊಟ್ಟವರು ಯಾರು? ಸ್ವಲ್ಪ ಮರ್ಯಾದೆಯನ್ನು ಕಾಪಾಡು, ಕಟ್ಟು ಹರಿದ ಪಂಚಾಗಿದೀಯ ಎಂದು ಬೈದು ಗದರಿಸಿ ಮನೆಗೆ ಹೊರಟು ಹೋದನು, ವೆಂಕಟೇಶ ಪೇಟೆಗೆ ಬಂದಾಗ ವಕೀಲರಾದ ಕೃಷ್ಣಪ್ಪನವರು ಸಿಕ್ಕಿದರು. ವೆಂಕಟರಮಣಯ್ಯನವರ ಸಾವನ್ನು ತಿಳಿದು ಅವರಿಗೆ ಸಂತಾಪ ವ್ಯಕ್ತಪಡಿಸುತ್ತಾ ವಿಲ್ ಬರೆದು ರಿಜಿಸ್ಟಾರ್ ಮಾಡಿಸಿದ್ದರೆಂದು ವೆಂಕಟೇಶನಿಗೆ ಹೇಳಿದರು. ಕೇಳಿದ ಕೂಡಲೇ ದಿಕ್ಕು ತೋಚದೆ ಸುಮ್ಮನಾದನು. ಆದರೆ ಅವನು ನನ್ನ ಒಂದು ಮಾತನ್ನಾದರೂ ಕೇಳಿ ತಾನೆ ನೀವೂ ಬರೆಯುವುದು? ಎಂದು ಹೇಳಿದನು.

ಸತ್ಯಭಾಮಳಿಗೆ ಮೊದಲೇ ವಿಲ್ ವಿಷಯ ಗೊತ್ತಿತ್ತೇ? ತಂತ್ರಗಾರ ಲೌಡಿ ಏನು ಗೊತ್ತಿಲ್ಲದೋಳ ಹಾಗಿದ್ದಾಳೆಯೇ ಎಂದು. ಸತ್ಯಭಾಮಳಿಗೆ ವ್ಯವಹಾರ ಜ್ಞಾನ ಇಲ್ಲ, ಗೊತ್ತಿಲ್ಲದೆ ಇದ್ದರೂ ಇರಬಹುದು.

ಎಂದು ಉಪಾಯವಾಗಿ ಸತ್ಯಭಾಮಳ ಹತ್ತಿರ ಕೇಳಿ ತಿಳೀಬೇಕು ಎಂದು ನಿರ್ಧರಿಸಿದನು. ವೆಂಕಟೇಶನ ಬಂದು ಬಳಗವನ್ನೆಲ್ಲಾ ಕರೆದುಕೊಂಡು ಬಂದು ಅಪ್ಪನ ತಿಥಿಯನ್ನು ಅದ್ದೂರಿಯಿಂದ ಮಾಡಿ ಮುಗಿಸಿದನು. ಮರುದಿನವೇ ವೆಂಕಟೇಶ ಅಪ್ಪನ ವಿಲ್ಲಿನ ವಿಷಯವನ್ನು ಹೆಂಡತಿಯ ಹತ್ತಿರ ವಿಚಾರ ಮಾಡಿದನು. ಈಗ ಏನಂತೀಯ ನೋಡು, ನೀನು ಬೇರೆಯಲ್ಲ, ನಾನು ಬೇರೆಯಲ್ಲ ಪಿತ್ರಾರ್ಜಿತ ಆಸ್ತಿಯಲ್ಲಿ ನನ್ನ ತಂಗಿಗೇನು ಸೇರಿದರೆ ದುಃಖವಿಲ್ಲ. ಈಗ ನೀನು ಜಮೀನು ವಹಿಸ್ಕತೀಯೋ, ಮದುವೆ ಮಾಡ್ಕಂತಿಯೋ? ಎಂದು ವೆಂಕಟೇಶ ಕೇಳಿದನು. ಸತ್ಯಭಾಮಳು ನನಗೆ ಇಷ್ಟವಿಲ್ಲ ಸ್ವತಃ ದುಡಿಬೇಕು ಎನ್ನುವ ಆಸೆಯಿದೆ, ಇದು ನನ್ನ ಪಾಲು ಅದು ನಿನ್ನ ಪಾಲು ಎನ್ನುವ ವ್ಯತ್ಯಾಸವನ್ನು ಮಾಡುವುದಿಲ್ಲ. ತೋಟದಲ್ಲೇ ವಾಸಮಾಡುತ್ತೀನಿ, ಈ ಗುಡಿಸಲಿರುವ ಜಾಗದಲ್ಲಿ ಒಂದು ಸಣ್ಣ ಹೆಂಚಿನ ಮನೆ, ಕಟ್ಟಿಸಿಕೊಂಡು ವ್ಯವಸಾಯದ ಪೀಠೋಪಕರಣಗಳನ್ನು ಇಟ್ಟುಕೊಳ್ಳುವುದಕ್ಕೆ ಸೌಲಭ್ಯವಿದ್ದರೆ ಸಾಕು, ಒಂದು ಸಣ್ಣ ಅಡಿಗೆ ಮನೆ, ಇನ್ನೇನೂ ಬೇಡ, ಎಲ್ಲಾ ಯಜಮಾನಿಕೆ ನೀನೆ ನೋಡಿಕೋ ಎಂದಳು.

ಸತ್ಯಭಾಮಳ ಮಾತಿನಿಂದ ಸ್ವಲ್ಪ ಸಮಾಧಾನವಾಯಿತು. ಆದರೂ ಸಹ ಮನಸ್ಸು ಸ್ವಲ್ಪ ಗಲಿಬಿಲಿಯಲ್ಲಿತ್ತು. ಮನೆಗೆ ಹಿಂತಿರುಗುವಾಗ ಯೋಚಿಸಿದ ನಂತರ ಉಪಾಯವು ಹೊಳೆಯಿತು. ಜಯಮ್ಮ ತವರು ಮನೆಯನ್ನು ನೋಡಿ ಒಂದುವರೆ ವರ್ಷವಾಗಿದ್ದರಿಂದ ವಿಠಲಾಪುರಕ್ಕೆ ಕರೆದುಕೊಂಡು ಹೋಗುವುದೆಂದು ನಿಶ್ಚಯಿಸಿದ. ವೆಂಕಟೇಶ ವೀಳ್ಯದೆಲೆ ಅಗಿಯುತ್ತಾ ಹೆಂಡತಿಗೆ ಹೇಳಿದನು, ಹೆಣ್ಣು ಮಕ್ಕಳಿಗೂ ಆಸ್ತಿಯಲ್ಲಿ ಸಮಪಾಲು ಕೊಡಬೇಕೆಂದು ಸರ್ಕಾರದವರು ಮಾಡಿರುವುದು ಬರೀ ನಮ್ಮ ಮನೆಗೆ ಅಲ್ಲ, ಇಡೀ ದೇಶಕ್ಕೆ ಆಗಿದೆ, ಅಲ್ಲಿ ಬರುತ್ತೆ ಇಲ್ಲಿ ಹೋಗುತ್ತೆ ಕೇಳಿ ತಿಳಿದುಕೋ ಎಂದನು. ಆದರೆ ನಿಮ್ಮ ಅಣ್ಣಂದಿರು ಇನ್ನೂ ಪಾಲಾಗಿಲ್ಲ, ಅದರಲ್ಲಿ ನನಗೆ ಬರಬೇಕಾದ ಒಂದು ಭಾಗ ಕೋಡಿ ಎಂದು ಕೇಳು ಎಂದನು. ಆದರೆ ಜಯಮ್ಮ ಹೆಣ್ಣು ಮಕ್ಕಳು ಪಾಲು ಕೇಳಿದರೆ ತವರು ಮನೆಯವರು ಎಲ್ಲಿಗೆ ಹೋಗಬೇಕು? ಅವರೇನು ಸಾಕಿ ಸಲಹಿ ಮದುವೆ ಮಾಡಿಕೊಟ್ಟಿಲವ್ವೆ? ಎಂದಳು. ವೆಂಕಟೇಶ ವಿಠ್ಠಲಾಪುರದಲ್ಲಿ ದಿನವಲ್ಲದೆ ಮರುದಿನವೂ ಇದ್ದ, ಮರುದಿನ ರಾತ್ರಿ ಹೆಂಡತಿಯೊಡನೆ ಬೇರೆ ಕೋಣೆಯಲ್ಲಿ ಮಲಗಿದ್ದಾಗ ಹೇಳಿದನು, ನಿನ್ನ ಪಾಲನ್ನು ತೆಗೆದುಕೊಳ್ಳದಿದ್ದರೆ ತವರು ಮನೆಯಲ್ಲಿ ಇರಬೇಕು ಎಂದು ಬೆದರಿಕೆ ಹಾಕಿದನು.

ವೆಂಕಟೇಶ ಹೇಳುವುದನ್ನು ಕೇಳಿ ಬಿಕ್ಕಿ ಬಿಕ್ಕಿ ಅತ್ತು ನಿದ್ದೆ ಇಲ್ಲದೆ ಒಂದು ರಾತ್ರಿಕಳೆದಿದ್ದಳು. ಬೆಳಗ್ಗೆ ಎದ್ದವನು ಕಾಫಿ ತಿಂಡಿಯನ್ನು ಕಾಯದೆ ಬಟ್ಟೆಗಳನ್ನು ಚೀಲಕ್ಕೆ ಹಾಕಿಕೊಂಡು, ಮಗುವನ್ನು ಎತ್ತಿಕೊಂಡು ಯಾರಿಗೂ ಹೇಳದೆ ಕೇಳದೆ ಬಸ್ ರಸ್ತೆಗೆ ಬಂದ. "ಇದೇನು ಭಾವ, ಈಗಲೇ ಹೋರಟಿರಿ"?[೨] ಮಗುವನ್ನು ಏಕೆ ಕರೆದುಕೊಂಡು ಬಂದಿದೀರಾ? ಎಂದದಕ್ಕೆ ಇವನು ನನಗೆ ಹೊಂದಿಕೊಂಡಿದ್ದಾನೆ.

ಸತ್ಯಭಾಮಳು ನೋಡಿಕೊಳ್ಳುತ್ತಾಳೆ. ಜಯಮ್ಮನ ಹತ್ತಿರ ಎಲ್ಲಾ ಹೇಳಿದೀನಿ, ಅದರ ಹಾಗೆ ಮಾಡಿ ಎಂದು ಏನು ಎಂಬುದನ್ನು ಹೇಳದೆ ಹೊರಟನು. ಆದರೆ ಸತ್ಯಭಾಮಳು ಮಗುವನ್ನು ನೋಡಿ ನನ್ನ ಹತ್ತಿರ ಇರುತ್ತಾನೆ ಜಯಮ್ಮ ಎಂದಿದ್ದಳು. ವೆಂಕಟೇಶ ಅದಕ್ಕೆ ನನ್ನ ಬಿಟ್ಟಿರಲ್ಲ ಎಂದು ಕರೆದುಕೊಂಡು ಬಂದೆ, ನಿನಗೆ ಬೇಸರವಾದರೆ ಆಟವಾಡುವುದಕ್ಕೆ ಇರಲಿ ಎಂದು ಹೇಳಿದನು. ಅಷ್ಟರಲ್ಲಿ ಸತ್ಯಭಾಮಳ ಗುಡಿಸಲಿನ ಹತ್ತಿರ ನಾಲ್ಕೈದು ಜನ ಬಂದಂತಾಯಿತು. ಮಗು ಅಮ್ಮ ಎಂದಿತು. ಸತ್ಯಭಾಮಳು ಹೊರಗೆ ಬಂದು ನೋಡುತ್ತಾಳೆ, ಜಯಮ್ಮನ ಮನೆಯವರೆಲ್ಲರೂ ಬಂದಿದ್ದಾರೆ. ಎಲ್ಲರ ಮುಖದಲ್ಲಿ ಚಿಂತೆ ಆವರಿಸಿದೆ. ಜಯಮ್ಮನ ಕಣ್ಣು ಊದಿಕೊಂಡು ಕೆಂಪಾಗಿವೆ, ಸತ್ಯಭಾಮಳಿಗೆ ಆಶ್ಚರ್ಯವಾಯಿತು, 'ನೀನೇ ಸಂಸಾರ ಉಳಿಸಬೇಕಮ್ಮ'[೩] ಎಂದು ಜಯಮ್ಮನ ತಾಯಿ ಸತ್ಯಭಾಮಳ ಕೈಯನ್ನು ಹಿಡಿದುಕೊಂಡು ಅಳಲು ಪ್ರಾರಂಭಿಸಿದಳು.

ಜಯಮ್ಮ ನಡೆದಿರುವ ಸಂಗತಿಯನ್ನು ಸತ್ಯಭಾಮಳಿಗೆ ಹೇಳಿದಳು. ಆದರೆ ಸತ್ಯಭಾಮಳು ವೆಂಕಟೇಶನಿಗೆ ಅವರಿಗೆ ಶಕ್ತಿ ಇದ್ದಷ್ಟು ಚೆನ್ನಾಗಿ ಮದುವೆ ಮಾಡಿಕೊಟ್ಟಿದ್ದಾರೆ. ಮುಂದೆ ಕರೆದು ಕಳಿಸಿ ಮಾಡುತ್ತಾರೆ. ಏನು ಕೊಡದೆ ಇದ್ದರೂ ಬೇಡ ಎಂದು ಒಪ್ಪಿಕೊಂಡು ಮದುವೆಯಾದದ್ದು? ನಾನು ಜವಳಿ ಅಂಗಡಿಯಲ್ಲಿ ಕೂಲಿ ಮಾಡುವುದನ್ನು ನೋಡಿ ವಿಲ್ ಬರೆದಿದ್ದಾನೆ. ಮನೆಯಲ್ಲಿ ಇರಲಿ ಎಂದು ಹೇಳುತ್ತಾ ನೀನೇನು ಕಮ್ಮಿ ಸಂಪಾದನೆ ಮಾಡ್ತಿದೀಯ? ಎಂದು ಕೇಳಿದಳು. ಅದಕ್ಕೆ ವೆಂಕಟೇಶನು ಕಾನೂನು ಪ್ರತಿಯೊಬ್ಬರಿಗೂ ಒಂದೇ ಆಗಿರಬೇಕು, ಇಲ್ಲದಿಲ್ಲರೆ ಯಾರಿಗೂ ಬೇಡ, ಅರ್ಥ ಮಾಡು ಎಂದನು. ತಲೆಹರಟೆ, ಬುದ್ಧಿ ಹೇಳುವುದು ಬೇಡ, ನಿನ್ನದು ಎಷ್ಟಿದೆ ಅಷ್ಟು ನೋಡು ಎಂದಾಗ ಸತ್ಯಭಾಮಳಿಗೆ ಅವಮಾನವಾಯಿತು. ಆದರೂ ಸಹ ಆಸ್ತಿಯ ಬದಲು ೧೬ ಸಾವಿರ ಹಣವನ್ನು ವಸೂಲಿ ಮಾಡಿದನು. ಈ ಹಣದಲ್ಲಿ ಮನೆಯನ್ನಾದರೂ ಕಟ್ಟಿಸಿ ಬಾಡಿಗೆಗೆ ಬಿಡಬೇಕು ಎಂದುಕೊಂಡನು.

ಸತ್ಯಭಾಮಳಿಗೆ ನಿನಗೆ ಏನಾದರೂ ಬೇಕು ಎಂದರೂ ತೆಗೆದುಕೊಂಡು ಹೋಗು ಎಂದು ಹೇಳಿ ಹೊರಟು ಹೋದನು. ಜಯಮ್ಮಳು ಬಾಣಂತಿತನಕ್ಕೆ ಊರಿಗೆ ಹೋಗಿದ್ದಾಗ ಹಜಮರ ಒಬ್ಬ ಹುಡುಗಿ ರುದ್ರಿ ಸೂಳೆಮುಂಡೆ ಮನೆಯ ಹಿತ್ತಲಿನ ಬಾಗಿಲಿನಿಂದ ಬರುತ್ತಿದ್ದಳು. ಅವಳು ಬರುವುದಕ್ಕೆ ಮುಂಚೆಯೇ ನರಸಿಂಹ ಜೋಯಿಸರನ್ನು, ಪೂಜೆಗೋ, ಗದ್ದೆಗೋ, ಅಥವಾ ಹೋಟೆಲಿನ ಹತ್ತಿರಕ್ಕೆ ಕಳುಹಿಸುತ್ತಿದ್ದರು. ಆದರೆ ಸತ್ಯಭಾಮಳಿಗೆ ಆಶ್ಚರ್ಯವಾಯಿತು. ಈ ದಾರಿ ಹಿಡಿದ್ದರಿಂದ ವೆಂಕಟೇಶ ಇಂಟರ್ ಮೀಡಿಯಟ್ ಪರೀಕ್ಷೆಯಲ್ಲಿ ಫೇಲಾಗಿದ್ದಾನೆ. ಆದ್ದರಿಂದಲೇ ಮನೆಗೆ ಅಡಿಗೆ ಮಾಡುವ ಸೊಸೆ ಬೇಕೆಂಬುದರ ಜೊತೆಗೆ ಈ ಕಾರಣವೂ ಸೇರಿ ಅಪ್ಪ ಬೇಗ ಮದುವೆ ಮಾಡಿದರು ಎಂದು ಮನಸ್ಸಿನಲ್ಲಿ ಎಂದುಕೊಂಡಳು. ಸುಂದರವಾದ, ಲಕ್ಷಣವಾದ ಹೆಂಡತಿ ಇರುವಾಗ ಏಕೆ ರೀತಿ ಮಾಡಿದ? ಒಬ್ಬೊಬ್ಬರ ಸ್ವಭಾವ

ಹೇಗಿರುತ್ತದೆ, ಬಾಣಂತಿತನಕ್ಕೆ ಹೋಗಿದ್ದಾಗ ಮಾಡಿರಬಹುದು. ಆದರೆ ಈಗ ನಿಂತಿರಬಹುದು, ಈ ವಿಷಯವನ್ನು ಕೇಳಿದರೆ ನಿನಗೆ ಯಾವಳು ಹೇಳಿದ್ಲು? ಚಪ್ಪಲಿ ತೆಗೆದುಕೊಂಡು ಹೊಡಿತ್ತೀನಿ ಎಂದು ಹೆಂಡತಿಗೆ ಹೇಳಿದನು, ಯಾರು ತಾನೆ ಇಂತಹ ವಿಷಯದಲ್ಲಿ ಎದುರಿಗೆ ಬಂದು ಹೇಳುತ್ತಾರೆ? ನಾನು ತಾನೇ ಅವರ ಹೆಸರನ್ನು ಹೇಳ್ಲಿ? ಎಂದಳು.

ತಿರುಮಲಾಪುರದಲ್ಲಿ ಜನಗಣತಿಯ ಕಾರ್ಯದಲ್ಲಿ ವೆಂಕಟೇಶನು ಪಾಲ್ಗೊಂಡಿದ್ದನು. ಬೇಡರ ಜಾತಿಯಮಲ್ಲನಾಯಕ ಬಂದು ವೆಂಕಟೇಶನಿಗೆ ಹೇಳಿದರು. ಬೇಡರಾದರೆ ಸಮಾಜದಲ್ಲಿ ಮರ್ಯಾದೆಯನ್ನು ಕಳೆದುಕೊಳ್ಳುವುದರಿಂದ ವಾಲ್ಮೀಕಿ ಎಂದು ಬರೆಸಬೇಕು. ಎಂದು ವೆಂಕಟೇಶನಿಗೆ ಹೇಳಿ ಅಂಗಲಾಚಿದನು. ಆದರೆ ನೂರು ರೂಪಾಯಿ ಕೊಡಬೇಕು ಎಂದಾಗ ಎಲ್ಲಿ ತರಾನ? ಎಂದು ಯೋಚಿಸಿದನು. ಮತದವರ ಹತ್ತಿರ ಚಂದವನ್ನು ಎತ್ತಿಕೊಂಡು ಬರುತ್ತೇನೆ. ನೀನು ಕೆಲಸ ಮಾಡು ಎಂದು ಗೆದ್ದವನಂತೆ ಹೊರಟು ಹೋದ. ಅಷ್ಟರಲ್ಲಿ ಕುರುಬ ಗೌಡರ ಯಜಮಾನ ಸೌದೇಗೌಡರು ಸಹ ಆತನಿಗೆ ಕೊಟ್ಟ ಉತ್ತರ ಮತ್ತು ತಂತ್ರವನ್ನೇ ಉಪಯೋಗಿಸಿ ವೆಂಕಟೇಶ ನಾನೂರು ರೂಪಾಯಿ ಕೇಳಿದ, ಆದರೆ ಮಗೀಗೆ ಜ್ವರ ಬಂದಿದ್ದಾವೆ. ಆದರೂ ನಾಳೆ ಮಠಕ್ಕೆ ಹೋಗಿ ಬರಬೇಕು, ಹಣ, ತೆಗೆದುಕೊಂಡು ಹೋಗುವುದರಿಂದ ನಾನೂರು ಆಗಲ್ಲ ನೂರು ರೂಪಾಯಿ ಕೊಡುತ್ತೇನೆ ಎಂದು, ನಮ್ಮ ಜಾತಿಗೆ ಕಾಳಿದಾಸ ಅಂದರೆ ಮೇಲಕ್ಕೆ ಬಂದ ಹಂಗಲ್ಲವೆ? ಎಂದು ಸೂಚಿಸಿದನು. ಸಾತಾನಿ ಜಾತಿಯ ರಾಮಾನುಜ್ಯನವರು ವೆಂಕಟೇಶನ ಹತ್ತಿರ ಬಂದು ಬ್ರಾಹ್ಮಣರೆಂದು ನಮೂದಿಸಬೇಕೆಂದು ಹೇಳಿದರು. ಆದರೆ ನಾವು ನಿಮ್ಮ ಹಾಗೆಯೇ ಬಡಬ್ರಾಹ್ಮಣರು ಎಂದು ಕಷ್ಟ ಹೇಳಿಕೊಂಡರು. ಕೊನೆಗೂ ಸಹ ನೂರು ರೂಪಾಯಿ ತಂದು ಕೊಡಲು ಒಪ್ಪಿದರು.

ವೆಂಕಟೇಶ ಸಂಸ್ಕೃತದಲ್ಲಿರುವ ಶ್ಲೋಕಗಳನ್ನು ಬರೆದುಕೊಡುತ್ತೇವೆ. ವ್ಯಾಕರಣ ಶುದ್ಧವಾಗುವ ಹಾಗೆಯೇ ಮಾಡಿ ತಿದ್ದುಕೊಡು ಎಂದನು, ಆದರೆ ಸತ್ಯಭಾಮಳಿಗೆ ಬರೆಯುವ ಶ್ಲೋಕಗಳು ಎಂಥವು ಮತ್ತು ಯಾವ ಉದ್ದೇಶಕ್ಕೆ ಎಂಬುದು ಅರ್ಥವಾಯಿತು. ಹಣ ತೆಗೆದುಕೊಂಡು ಇಲ್ಲದ ಶಾಸ್ತ್ರ ಸೃಷ್ಟಿಸುವುದಕ್ಕೆ ಹೊರಟಿದೀಯಲ್ಲ, ನಿನ್ನ ಆಸೆಗೆ ಮಿತಿ ಇರಬಾರದೆ? ಎಂದು ಕೋಪಗೊಂಡಳು. ಎಲ್ಲಾ ಜಾತಿಯವರು ಬ್ರಾಹ್ಮಣರಿಗೆ ಸರಿಸಮಾನವಾಗಬೇಕು, ಎಂದು ಪ್ರಯತ್ನ ಮಾಡುತ್ತಿದ್ದಾರೆ, ಆದ್ದರಿಂದ ವೆಂಕಟೇಶನು ಹಣವನ್ನು ತೆಗೆದುಕೊಳ್ಳದೆ ಯಾರು ಹಾಗೆಯೇ ಮಾಡುವುದಿಲ್ಲ? ಬಡಬ್ರಾಹ್ಮಣನಾಗಿದ್ದರೆ ಒಂದು ರೂಪಾಯಿಯನ್ನು ಕೊಡ್ತಿರಲಿಲ್ಲ. ಗ್ರಾಮ ಪುರೋಹಿತನಾಗಿ ಅನುಕೂಲವಾಗಿದ್ದೀನಿ ಆದರೂ ರಾಜಕೀಯ ಮಾಡುತ್ತೇನೆ. ಸುತ್ತಮುತ್ತಲಿನ ಊರಿನಲ್ಲಿ ನನ್ನ ಮಾತುಗಳು ನಡೆಯುತ್ತವೆ. ಆದರೂ ನಾಡದ್ದೀನ ಸಭೆಯಲ್ಲಿ ನನ್ನ ಮಾತುಗಳನ್ನು ಶಂಖದಿಂದ ಬಿದ್ದು ನೀರಾಗುತ್ತದೆ ಎಂದು ಹೇಳಿದನು.

ಆದರೂ ಸಹ ಸತ್ಯಭಾಮಳಿಗೆ ತರಾಟೆ ತೆಗೆದುಕೊಂಡು ನನಗೆ ಯಾವ ಮಹಾ ಆಸ್ತಿ ಇದೆ ಎಂದು ತಿಳ್ಕಂಡಿದೀಯಾ? ದೇವಸ್ಥಾನದ ಸಮಿತಿಗೆ ಅವನ ಅಪ್ಪ ಇಲ್ಲವೇ ಮೇಲಗಿರಿಗೌಡ ಅಧ್ಯಕ್ಷನಾಗಿರಬೇಕು, ಪೂಜಾರಿಯ ಜಮೀನು ಸರ್ಕಾರಕ್ಕೆ ಸೇರಬೇಕು, ಅವರಿಗೆ ಸಂಬಳ ೪೦ ರೂ.ಗಳನ್ನು ಗೊತ್ತು ಮಾಡಬೇಕು.

ದೇವರ ಪೂಜೆಯು ಮಾತ್ರ ಪ್ರತಿನಿತ್ಯವೂ ನಡೆಯಬೇಕು, ಪೂಜಾರಿ ಯಾವಾಗಲು ಬಡವನಾಗಿಯೇ ಇರಬೇಕು. ಎಲ್ಲಾ ಹೋದಮೇಲೆ ನನಗೆ ಉಳಿಯುವುದೇನು? ಅದಕ್ಕೆ ಮುಂಚಿತವಾಗಿ ಆಸ್ತಿ ಮಾಡಿಕೊಳ್ಳದೆ ಇದ್ದರೆ ನನ್ನ ಗತಿ ಏನು? ಮಕ್ಕಳ ಗತಿ ಏನು? ಅನ್ಯಾಯದಲ್ಲಿ ಹಣ ಸಂಪಾದನೆಯನ್ನು ಎಲ್ಲಾ ಜನರುಗಳು ಸಮಾಜದಲ್ಲಿ ಮಾಡಲು ತೊಡಗಿರುತ್ತಾರೆ. ಎಂದು ಸತ್ಯಭಾಮಳಿಗೆ ಮನವರಿಕೆ ಮಾಡಿಕೊಟ್ಟನು. ಅನ್ಯಾಯದ

ಹಣವನ್ನೆಲ್ಲಾ ಅವರಿಗೆ ಕೊಟ್ಟುಬಿಡು ಇಲ್ಲದಿದ್ದರೆ, ನಾಡದ್ದೀನ ಸಭೆಯಲ್ಲಿ ಬಂದು ನೀನು ಮಾಡಿದ್ದೆಲ್ಲ ಹೇಳುತ್ತೇನೆ. ವೆಂಕಟೇಶನಿಗೆ ಕೋಪ ಬಂದು ತಂಗಿಗೆ ಹೀನಾಯವಾಗಿ ಬೈದನು. ಬೆಟ್ಟಯ್ಯನು ಸಹ ನಮ್ಮನ್ನು ಅಸ್ಪೃಶ್ಯರು ಎಂದು ಕರೆಯಬಾರದು, ನಮ್ಮನ್ನು ಸಹ ಎಲ್ಲರಂತೆ ಊರೊಳಕ್ಕೆ ಮತ್ತು ನಿಮ್ಮ ಮನೆಯೊಳಕ್ಕೆ ಬರುವುದಕ್ಕೆ ಅವಕಾಶ ಮಾಡಿ ಎಂದು ಕೇಳಿಕೊಂಡನು. ಆದರೂ ಊರಿನ ಎಲ್ಲಾ ಜಾತಿಗಳ ಅಂತಸ್ಥನ್ನು ನಿರ್ಧರಿಸುವ ಸಭೆಯು ದೇವಸ್ಥಾನದ ದಿಬ್ಬದಲ್ಲಿ ಸೇರಿದೆ, ನ್ಯಾಯಯುತವಾಗಿ ಜಾತಿ ನಿರ್ಣಯವಾಗುತ್ತದೆ. ಯಾವ ಮತಕ್ಕೂ ಅನ್ಯಾಯವಾಗಬಾರದೆಂದು ವೆಂಕಟೇಶನು ಹೇಳಿದನು.

ಸತ್ಯಭಾಮಳು ಎಲ್ಲರೂ ಬ್ರಾಹ್ಮಣರು ಎಂದಳು, ಆದರೆ ವೆಂಕಟೇಶ ಸತ್ಯ ನಿಂಗೇನು ಬುದ್ದಿ ಇದೆಯೋ ಇಲ್ಲವೋ? ಎಂದು ಹೇಳಿದನು, ದೇವಸ್ಥಾನದ ಹತ್ತಿರ ಗಲಾಟೆಯಾಗಿ ಎಲ್ಲಾರೂ ಸಹ ಓಡಿ ಹೋದರು. ಶ್ರೀನಿವಾಸ ಸದ್ಯದಲ್ಲಿಯೇ ನಿನ್ನ ಹತ್ತಿರ ಬರಬಹುದು, ನೀನು ಏನಂತೀಯ? ಆದರೂ ಅವಳು ಮಾತನಾಡಲಿಲ್ಲ. ಸ್ವಲ್ಪ ಹೊತ್ತಾದ ನಂತರ ನೀನು ಏನೇ ಮಾತನಾಡಿದ್ದರೂ ನನ್ನ ತಂಗಿಯೇ. ನಮ್ಮ ಮನೆಯವಳೇ ಮೇಲಗಿರಿಗೌಡರು ಹೇಳಿದರು ಎಂದು ಮದುವೆಗೆ ಒಪ್ಪಿಕೊಂಡರೆ ತಿಳಿದುಕೊಂಡು ಬಿಡು, ನನಗೆ ನೀನೂ ಯಾವ ರೀತಿಯ ಸಂಬಂಧವಿರುವುದಿಲ್ಲ. ನಿನ್ನ ಕಡೆಗೆ ತಿರುಗಿನೋಡುವುದಿಲ್ಲ. ಅಪ್ಪನ ಮೇಲೆಯೆ ಆಣೆಯನ್ನು ಹಾಕಿ ಹೇಳುತ್ತೇನೆ, ಆದರೆ ವೆಂಕಟೇಶನ ಮಾತಿಗೆ ಕೆರಳಿದ ಸತ್ಯ ಏಕೆ ಹಾಂಗತೀಯ? ಅವನನ್ನು ಮದುವೆಯಾದರೆ ನಿನಗೆ ತುಂಬಾ ಅನುಕೂಲವಾಗುತ್ತದೆ, ಅನುಕೂಲವೇನು? ಹೊಸ ಬಸ್‌ಲೈನ್ ಕೋಡಿಸುತ್ತಾರೆ ಎಂದ ತಕ್ಷಣ ವೆಂಕಟೇಶ ಕೋಪಗೊಂಡು ಆದರೆ ನಾನೇನು ಬರೀ ದುಡ್ಡಿಗೆ ಬದುಕಿದೀನಿ ಎಂದು ಮಾಡ್ಕಂಡಿದೀಯ? ಆ ನನ್ನ ಚಪ್ಪಲಿ ದುಡ್ಡು ಎಷ್ಟು ಸಂಪಾದನೆ

ಮಾಡುತ್ತೇನೆ ಗೊತ್ತಾ? ನೀನು ಸರಿಯಾಗಿದ್ದರೆ ಬಸಲೈನ್ ಸಿಕ್ಕಿದರೂ ಬಿಡುವುದಿಲ್ಲ. ಅವರ ಮನೆಗೆ ಸೇರಿ ಕೊಟ್ಟರೂ ತೆಗೆದುಕೊಳ್ಳುವುದಿಲ್ಲ. ಮಂತ್ರಿಗಳನ್ನು ಬೈಗುಳದಲ್ಲಿ ಬೈದನು.

ವೆಂಕಟೇಶನು ಮರ್ಯಾದೆಗೆ ಬದುಕಿರುವನು ಆದರೂ ಸತ್ಯಭಾಮಳು ಸುಮ್ಮನಿದ್ದಳು, ಹಳೇ ಹುಡುಗಿ ಪಾದವೇ ಗತಿ ಎಂದು ಬಂದಿದ್ದಾರೆ. ಮಾನ ಮರ್ಯದೆಗೆ ಬದುಕಿದರೆ ಯೋಚನೆಯನ್ನು ಮಾಡು ಎಂದು ಹೇಳಿ ಹೋರಟು ಹೋದನು. ಮೇಲಗಿರಿಗೌಡ ಕಷ್ಟವಿರುವುದರಿಂದ ನನ್ನನ್ನು ಹುಡುಕಿಕೊಂಡು ಬಂದಿದ್ದಾನೆ. ಊಟ ಮಾಡುತ್ತೇನೆಂದು ವಿಶ್ವಾಸ ತೋರಿಸುತ್ತಾನೆ. ಇಷ್ಟು ದಿವಸ ಬಂದಿದ್ದನೇನು? ಆದರೂ ತನ್ನ ಅರಮನೆಯಲ್ಲಿ ಕುಳಿತುಕೊಂಡು ಆಳುಗಳ ಹತ್ತಿರ ಹೇಳಿಕಳಿಸುತ್ತಿದ್ದನು, ಅವನು ಊಟ ಮಾಡುತ್ತಾ ನಿಮ್ಮ ಜನರು ಮಾಡಿರುವ ತಿಳಿಸಾರು ಮಾಡುವುದಕ್ಕೆ ನಮ್ಮವರಿಗೆ ಬರುವುದಿಲ್ಲ. ಆದರೆ ವೆಂಕಟೇಶ ಪುಳಿಚಾರು ತಿಂದೆ ನಾನು ಹಾಳಾದವು ಎಂದನು, ಅದಕ್ಕೆ ಮುಖ್ಯ ವಿಷಯವಾದ ಬೆಟ್ಟಯ್ಯನವರು. ಮಗಳನ್ನು ಮದುವೆ ಮಾಡಿಕೊಳ್ಳುತ್ತೇನೆ ಎಂದು ಹೇಳುತ್ತಾ ಬಸ್ಸುಲೈನ್ ಬೇಕಾ? ಲಾರಿ ಬೇಕಾ? ದರಖಾಸ್ತಿನಲ್ಲಿ ಜಮೀನು ಬೇಕಾ? ನೀನು ಮುಂದೆ ಬಂದರೆ ಹೊಟ್ಟೆಕಿಚ್ಚ? ಮೇಲಗಿರಿಗೌಡ್ರು ಎಂದರು. ಸತ್ಯಭಾಮ ಏನೋ ತಂತ್ರವನ್ನು ಮಾಡಿ ಒಪ್ಪಿಸಿದ್ದಾಳೆ. ಶ್ರೀನಿವಾಸನಿಗೆ ಬುದ್ದಿ ಹೇಳಿ ತಪ್ಪಿಸ ಜವಾಬ್ದಾರಿ ನಿನ್ನದು ಎಂದು ಹೇಳಿದನು. ವೆಂಕಟೇಶನು ಇವರಿಗೆ ಏಕೆ ಸಹಾಯವನ್ನು ಮಾಡಬೇಕು ನನಗೆ ಅನುಕೂಲ ಮಾಡಿಲ್ಲ ಮನಸ್ಸಿನಲ್ಲಿ ಹೇಳಿಕೊಂಡನು, ಇವರ ವಿರೋಧವನ್ನು ಕಟ್ಟುವುದಕ್ಕಿಂತ ಕೆಲಸ ಮಾಡಿಕೊಡುತ್ತೇನೆಂದು ಒಪ್ಪಿಕೊಂಡನು, ಭೂಮಿಗೆ ಅರ್ಜಿ ಹಾಕಿದರೆ ಒಂದು ಸಾವಿರದಲ್ಲಿ ಕಿಮ್ಮತ್ತಿನಲ್ಲಿ ಮಾಡುತ್ತೇನೆ ಎಂದು ಭರವಸೆಯನ್ನು ಕೊಟ್ಟಿದ್ದನು. ವೆಂಕಟೇಶನು ಈ ನೆಪಮಾಡಿಕೊಂಡು ಮನೆಗೆ ಬೇಕಾದ ಸಾಮಾನುಗಳನ್ನು ತರಲು ಮತ್ತು ಶ್ರೀನಿವಾಸನಿಗೆ ಮಾದಿಗಳಾದ ಮೀರಾಳನ್ನು ಮದುವೆಯಾಗದಂತೆ ವಿಚಾರವನ್ನು ಹೇಳಲು ತುಮಕೂರಿಗೆ ಬಂದನು. ಶ್ರೀನಿವಾಸ ವೆಂಕಟೇಶನನ್ನು ಅಪರೂಪಕ್ಕೆ ಬಂದಿದ್ದೀರಾ ಬನ್ನಿ ಎಂದು ಸ್ವಾಗತಿಸಿದನು. ವೆಂಕಟೇಶ ಶ್ರೀನಿವಾಸನನ್ನು ದಿವಾನರ ಮಗ, ಮೋಟಾರ್ ಮಾಲೀಕ, ಪಾಳೆಗಾರರ ಮೊಮ್ಮಗ ಎಂದು ಹೊಗಳಿಕೆಯ ಮಾತುಗಳನ್ನು ಆಡಿದ. ನಂತರ ಶ್ರೀನಿವಾಸನನ್ನು ಕೇಳಿದ ಹೋಲ್‌ಸೇಲ್ ಅಂಗಡಿಯನ್ನು ತೋರಿಸಿ ಕಡಿಮೆ ಬೆಲೆ ಹಾಕಿಸಿಕೊಡು ಎಂದನು, ಗುಮಾಸ್ತರು ಬಂದು ಕರೆದುಕೊಂಡು ಹೋಗುತ್ತಾರೆ ಸಮಾಚಾರವನ್ನೆಲ್ಲಾ ಹೇಳಿ ಎಂದನು ಆದರೆ ವೆಂಕಟೇಶ ಧೈರ್ಯ ಮಾಡಿಕೊಂಡು ಮದುವೆ ಮಾಡಿಕೊಳ್ಳುವುದಕ್ಕೆ ಹೊರಟಿದ್ದಿಯಾ ಎಂದು ಅವನನ್ನು ಹೊಗಳಿದನು, ಆದರೆ ಸತ್ಯಭಾಮಳು ಬುದ್ದಿಗೆಟ್ಟು ಕ್ಷತ್ರೀಯ ಹುಡುಗನ್ನ ಬಿಟ್ಟು ಮಾದಿಗರೊನ್ನ ಕಟ್ಕುತ್ತೀನಿ, ಆದರೆ ನಾನು ಹ್ಯಾಗಯ್ಯ ತಡೀಬೇಕು ವೆಂಕಟೇಶ ಶ್ರೀನಿವಾಸನಿಗೆ ಹೇಳಿದನು. ಇವನು ಉದ್ವಿಗ್ನನಾದನು, ಬಸ್ ಮಾಲೀಕನಾಗಿರುವ ನಿನ್ನ ಅಂತಸ್ತೇನು ಯಕ್ಕಡದ ಅಂಗಡಿ ಇಟ್ಕಂಡು

ಬಂದವರು ಕಾಲು ಮುಟ್ಟಿ ವ್ಯಾಪಾರ ಮಾಡುವ ಅವನ ಅಂತಸ್ತೇನು? ನಿನ್ನನ್ನು ಒಪ್ಪಿಕೊಳ್ಳದಿದ್ದವನು ಅವನನ್ನು ಭಾವ ಎಂದು ಒಪ್ಕತ್ತೀನಾ? ಎಂದನು. ಆಮೇಲೆ ಮದುವೆಯೇ ಆಗಲ್ಲ ಅಂದಳು. ಮಾದಿಗ ಎಷ್ಟು ಸಲ ಅವಳ ತೋಟದ ಗುಡಿಸಲಿಗೆ ಹೋಗುತ್ತಾನೆ, ಅಲ್ಲಿ ಏನೇನಾಗುತ್ತೆ ಎಂದು ಎಲ್ಲರಿಗೂ ಗೋತ್ತಿರುವ ವಿಚಾರವಾಗಿದೆ.

ಬೀದಿಯಲ್ಲಿ ತಲೆ ಎತ್ತಿಕೊಂಡು ತಿರುಗೋಕೆ ಹಾಗಲ್ಲ ಎಂದು ಅನುಮಾನಾಸ್ಪದ ಮಾತುಗಳನ್ನು ಹೇಳಿ ಒಲಿಸಿಕೊಂಡನು, ಗುಮಾಸ್ತರು ಎಷ್ಟು ಹೊತ್ತಿಗೆ ಬರ್ತಾರೆ? ನಾನು ಬಂದದ್ದು ತಡವಾಯಿತು ಎಂದು ಹೇಳಿದನು. ಲಾರಿಗಳಲ್ಲಿ ಚಪ್ಪಲಿಗಳನ್ನು ತುಂಬಿಕೊಂಡು ತಿರುಗಾಡಲಿ, ಅಂಗಡಿಯನ್ನು ಹುಡುಕಿಕೊಂಡು ನಾನೇ ಹೋಗುತ್ತೇನೆ. ಆದರೆ ದೊರೆ ಮಗನನ್ನು ನಂಬಿಕೊಂಡು ಕುಳಿತರೆ ಬಡವರ ಕೆಲಸ ಮುಗಿಯುವುದಿಲ್ಲ. ಆದ್ದರಿಂದಲೇ ಬರೀ ಕೈಯಲ್ಲಿ ಹೋದರೆ ಯಾರಿಗಾದರೂ ಅನುಮಾನ ಬರಬಾರದು ಎಂದು ಯೋಚಿಸಿದ ಮೇಲೆ ಅಂಗಡಿಯನ್ನು ಹೊಕ್ಕನು ವೆಂಕಟೇಶ ಯೋಚನೆ ಮಾಡುತ್ತಾ ದೇವಸ್ಥಾನ ಪ್ರವೇಶ ಮಾಡಿಸುತ್ತಾನೆ. ಬೆಟ್ಟಯ್ಯನವರ ಮಗ ಮೋಹನದಾಸ ಯಾರನ್ನು ಸಹ ಲೆಕ್ಕಕ್ಕೆ ಇಡುವುದಿಲ್ಲ. ಅಹಂಕಾರ ಸ್ವಭಾವದವನು. ಮತಗಳು ಎಲ್ಲವು ಸಮನಾಗಿರಬೇಕು. ಭೇದಭಾವವಿರಬಾರದು ಎನ್ನುವಾಗ ವೆಂಕಟೇಶನು ಪ್ರವೇಶವನ್ನು ಮಾಡಿ ನಮ್ಮಲ್ಲಿಯಾವಾಗಲೂ ಭಿನ್ನಾಭಿಪ್ರಾಯಗಳಿರಬಾರದು, "ಐಕ್ಯಮತ್ಯವೇ ಜಯ, ಅನೈಕ್ಯಮತ್ಯವೇ ಅಪಜಯ"[೪] ಎಂದು ಹೇಳಿದ್ದರಿಂದ ವಾದಗಳು ನಿಂತು ಜಗಳವಾಗಲಿಲ್ಲ. ಜನರುಗಳು ಎಲ್ಲಾದರೂ ನಿಲ್ಲಬೇಕೆಂದು ತೀರ್ಮಾನವಾಯಿತು. ವೆಂಕಟೇಶನು ಎಲ್ಲರಿಗೂ ಕೇಳುವಂತೆ ಜೋರಾಗಿ ಹೇಳಿದನು, ನೀವೆಲ್ಲರು ನಮ್ಮವರು, ಭಾಂಧವರು ಶಿಷ್ಯವರ್ಗದವರು, ಮೊದಲಿನಿಂದಲೂ ದೇವಸ್ಥಾನಕ್ಕೆ ಬರುತ್ತಾರೆ. ಆದರೆ ಹನ್ನೆರಡು ವರ್ಷದಲ್ಲಿ ಒಂದು ಸಲ ದೇವಸ್ಥಾನ ಪ್ರವೇಶ ಮಾಡಿದ್ದಾರೆ, ಮಧ್ಯದಲ್ಲಿ ನಿಂತು ಕ್ರಮವಾಗಿ ಬರುಬಹುದಿತ್ತು.

ದೇವಸ್ಥಾನಕ್ಕೆ ವರ್ಷಕ್ಕೊಂದು ದಿನವಾದರೂ ನವರಾತ್ರಿಯಲ್ಲಿ ಪ್ರವೇಶ ಮಾಡಿದರೆ. ಪ್ರತಿ ನವರಾತ್ರಿದಿನವೂ ಮಂಗಳಾರತಿ ಮಾಡಿಕೊಂಡು ತೀರ್ಥ ಪ್ರಸಾದವನ್ನು ತೆಗೆದುಕೊಂಡು ಹೋಗಬಹುದು, ಮೋಹನದಾಸ, ಈ ಮಾತನ್ನು ಒಪ್ಪಲಿಲ್ಲ ಆದರೂ ವಿಗ್ರಹದ ಹಿಂದೆ ಕನ್ನಡಿಯನ್ನು ಇಟ್ಟು ಅದರ ಪ್ರತಿಬಿಂಬವನ್ನು ಬೀಳುವ ಹಾಗೆ ಮಾಡುವುದು ಎಂದರೂ ಸಾಧ್ಯವಿಲ್ಲದ ಮಾತು ಎಂದರು. ಪ್ರತಿನಿತ್ಯವು ಪ್ರವೇಶ ಮಾಡಬೇಕು, ಮೋಹನದಾಸನ ಮೇಲೆ ವೆಂಕಟೇಶನ ಕಣ್ಣು ಬಿದ್ದಿತು. ಇವನಿಂದಲೇ ಕೆಲಸಗಳು ಆಗುತ್ತಿರುವುದೆಂದು ಅವಮಾನಪಟ್ಟನು. ದೇವಸ್ಥಾನದ ಒಳಗಡೆಯಲ್ಲಿ ಮೋಹನದಾಸ ಬಿದ್ದಿದ್ದನ್ನು ನೋಡಿ ದೇವರ ಸತ್ಯ ನಿಮಗೇನು ಗೊತ್ತು? ರಾವು ಬಡಿದಿದೆ, ಬೇಡ ಎಂದರೂ ಕೇಳಲಿಲ್ಲ ಪ್ರವೇಶ ಮಾಡಿಬಿಟ್ಟರು. ಆದರೆ ಗುಡಿಯೊಳಕ್ಕೆ ಏಕೆ ಹೋದಿರಿ? ಎಂದು ಜೋರಾಗಿ ವೆಂಕಟೇಶ ಹೇಳಿದನು. ಶ್ರೀನಿವಾಸನಿಗೆ

ಹುಚ್ಚು ಹಿಡಿದಿದ್ದರಿಂದ ಸತ್ಯಭಾಮಳ ಹತ್ತಿರಕ್ಕೆ ಕರೆದುಕೊಂಡು ಹೋಗುತ್ತೇನೆ. ಆಕೆಯನ್ನು ನೋಡಿ ಕಡಿಮೆಯಾಗಬಹುದು, ಆದರೆ ಅವನು ವೆಂಕಟರಮಣಯ್ಯ ಬಿದ್ದಿ ಮುಳಗಿದ್ದಜಾಗದಲ್ಲಿ ಮುಳುಗಿ ಪ್ರಾಣವನ್ನು ಕಳೆದುಕೊಳ್ಳುತ್ತೇನೆ ಎಂದನು. ಆದರೂ ಹುಚ್ಚು ಜಾಸ್ತಿಯಾಗಿದೆ. ಆಸ್ಪತ್ರೆಗೆ ಸೇರಿಸಿದರೂ ಗುಣವಾಗುತ್ತಿಲ್ಲ. ಜೀವವಿದ್ದರೂ ಪ್ರಯೋಜನವಿಲ್ಲ, ಸತ್ತವನಂತೆ ಸುಮ್ಮನಿರುವುದಿಲ್ಲ. ಸಾಯುವ ಸ್ಥಿತಿಯಲ್ಲಿರುವುದನ್ನು ಕಾದಂಬರಿಯಲ್ಲಿ ಕಾಣಬಹುದಾಗಿದೆ.

**ಕೊನೆ ಟಿಪ್ಪಣಿಗಳು**

೧. ಡಾ. ಎಸ್ಎಲ್ ಭೈರಪ್ಪನವರ ಕಾದಂಬರಿಗಳಲ್ಲಿ
ಧರ್ಮ, ಕರ್ಮ, ಜಿಜ್ಞಾಸೆ, ಡಾ. ಕೆ.ಎಲ್.ಗೋಪಾಲ ಕೃಷ್ಣಯ್ಯ ಪುಟ ಸಂಖ್ಯೆ ೧೭೯.೧

೨. ದಾಟು ಎಸ್. ಎಲ್ ಭೈರಪ್ಪ. ಪುಟ ಸಂಖ್ಯೆ ೨೨೪.೨

ಪುಟ ಸಂಖ್ಯೆ ೨೨೫.೩

೩. ಡಾ. ಎಸ್ಎಲ್ ಭೈರಪ್ಪನವರ ಕಾದಂಬರಿಗಳಲ್ಲಿ
ಧರ್ಮ, ಕರ್ಮ, ಜಿಜ್ಞಾಸೆ, ಡಾ. ಕೆ.ಎಲ್.ಗೋಪಾಲ ಕೃಷ್ಣಯ್ಯ ಪುಟ ಸಂಖ್ಯೆ ೨೦೦.೪

***

ಅಧ್ಯಾಯ ೭

# ಸಮಾರೋಪ

ಎಸ್.ಎಲ್. ಭೈರಪ್ಪನವರ "ದಾಟು ಕಾದಂಬರಿ : ಒಂದು ವಿಶ್ಲೇಷಣೆ" ಎಂಬ ಈ ಸಂಪ್ರಬಂಧದಲ್ಲಿ ಬೇರೆ ಬೇರೆ ಅಧ್ಯಾಯಗಳಲ್ಲಿ ಚರ್ಚಿಸಿ ವಿಶ್ಲೇಷಣೆಯನ್ನು ಮಾಡಲಾಗಿದೆ. ಒಂದನೇ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ಮಹತ್ವ ಮತ್ತು ವಿಧಾನಗಳನ್ನು ಕುರಿತು ವಿವರಿಸಲಾಗಿದೆ. ಎರಡನೆ ಅಧ್ಯಾಯದಲ್ಲಿ ದಾಟು ಕಾದಂಬರಿಯಲ್ಲಿ ಜಾತಿ ವ್ಯವಸ್ಥೆಯ ಸಂಘರ್ಷಗಳು ಎಂಬುದರ ಬಗ್ಗೆ ಚರ್ಚಿಸಲಾಗಿದೆ. ಮೂರನೇ ಅಧ್ಯಾಯದಲ್ಲಿ ಸ್ತ್ರೀವಾದಿ ನೆಲೆಯ ಸ್ಥಿತ್ಯಂತರಗಳನ್ನು ಕುರಿತು ಚರ್ಚೆಯನ್ನು ಮಾಡಲಾಗಿದೆ. ನಾಲ್ಕನೇ ಅಧ್ಯಾಯದಲ್ಲಿ ದಾಟು ಕಾದಂಬರಿಯಲ್ಲಿ ರಾಜಕೀಯ ಬದುಕಿನ ಆಲೋಚನೆಗಳನ್ನು ಕುರಿತು ಚರ್ಚಿಸಲಾಗಿದೆ. ಐದನೇ ಅಧ್ಯಾಯದಲ್ಲಿ ದಾಟು ಕಾದಂಬರಿಯಲ್ಲಿ ಗಂಡು ಹೆಣ್ಣಿನ ಸಂಬಂಧಗಳನ್ನು ಕುರಿತು ಚರ್ಚಿಸಲಾಗಿದೆ. ಆರನೇ ಅಧ್ಯಾಯದಲ್ಲಿ ದಾಟು ಕಾದಂಬರಿಯಲ್ಲಿ ಕುತಂತ್ರ ಬದುಕಿನ ಚಿತ್ರಣಗಳನ್ನು ಕುರಿತು ಚರ್ಚಿಸಲಾಗಿದೆ.

ಎಸ್.ಎಲ್. ಭೈರಪ್ಪನವರ ದಾಟು ಕಾದಂಬರಿಯು ತನ್ನ ಸಮಕಾಲೀನ ಸಮಾಜದಲ್ಲಿ ಬೇರು ಬಿಟ್ಟಿರುವ ಜಾತಿ ವ್ಯವಸ್ಥೆ ಸಮಸ್ಯೆ, ಅಂತರ್ಜಾತಿ ವಿವಾಹ ಸಮಸ್ಯೆ ಮತ್ತು ಹರಿಜನರ ಸಮಸ್ಯೆಗಳನ್ನು ಒಳಗೊಂಡಿರುವ ಸಮಾಜವಾದಿಯಾದ ಕಾದಂಬರಿಯಾಗಿದೆ. ಇವರ ಹನ್ನೊಂದನೆಯ ಕೃತಿ ದಾಟು ಕಾದಂಬರಿಯನ್ನು ಕುರಿತು ಅಧ್ಯಯನ ಮಾಡಲಾಗಿದೆ ಮತ್ತು ವಿಮರ್ಶಾ ಲೇಖನಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ. ವಸ್ತು ವೈವಿಧ್ಯತೆ, ವಿಭಿನ್ನ ಬಗೆಯ ಪಾತ್ರ, ಚಿತ್ರಣ, ಜೀವನ ದರ್ಶನ ಮತ್ತು ಕಲಾ ನೈಪುಣ್ಯತೆಗಳಿಂದ ಅವರ ಕಾದಂಬರಿಗಳು ಮಹತ್ವದ ಕೃತಿಯಾಗಿ ಪ್ರಸಿದ್ದಿ ಪಡೆದಿದೆ. ಪರಂಪರೆ ಮತ್ತು ಅಧುನಿಕತೆಗಳ ನಡುವೆ ಏರ್ಪಡುವ ಸಂಘರ್ಷ, ವಿವಿಧ ಸಂಸ್ಕೃತಿಗಳು ಒಂದೆಡೆ ಬೆರೆತಾಗ ಉಂಟಾಗುವ ಸಂಘರ್ಷ, ಜಾತಿ ಮತ್ತು ಮತಗಳ ನಡುವೆ ತಲೆದೋರುವ ಸಂಘರ್ಷಗಳು. ಸಹಪಂಕ್ತಿ

ಬೋಜನಗಳು ದೇವಾಲಯಗಳ ಮುಕ್ತ ಪ್ರವೇಶಗಳ ಸಮಸ್ಯೆಗಳು. ಅವರ ಕೇಂದ್ರ ಪ್ರಜ್ಞೆಗಳಾಗಿವೆ. ಈ ತಾತ್ವಿಕ ದೃಷ್ಟಿಯೊಂದಿಗೆ ನೈಜ ಜೀವನದ ಪ್ರೀತಿ ಪ್ರೇಮಗಳು ಕಾಮ, ದಾಂಪತ್ಯ, ವಾತ್ಸಲ್ಯ, ಅಂತರ್ಜಾತೀಯ ವಿವಾಹಗಳು ಭೈರಪ್ಪನವರ ಕಾದಂಬರಿಗಳಲ್ಲಿ ಪ್ರಧಾನವಾಗಿ ಒಳಗೊಂಡಿವೆ. ಗ್ರಾಮೀಣ ಭಾಷೆಯ ಸೊಗಡನ್ನು ಕಾದಂಬರಿಯಲ್ಲಿ ಬಳಸಲಾಗಿದೆ.

ಸಮಾಜದಲ್ಲಿ ಎಲ್ಲಾ ಮತಗಳಲ್ಲಿಯೂ ಜಾತಿ ಸಮಸ್ಯೆಯು ಕಂಡುಬಂದರೂ, ಇಂದಿನ ಸಮಾಜದಲ್ಲಿ ಎಲ್ಲಾ ಕಡೆಯೂ ಜಾತಿ ಸಮಸ್ಯೆಯು ಬೂದಿಮುಚ್ಚಿದ ಕೆಂಡದಂತೆ ಹೊಗೆಯಾಡುವುದನ್ನು ಕಾಣಬಹುದಾಗಿದೆ. ಎಲ್ಲರೂ ಸಹ ಜಾತಿಗೆ ವಿರುದ್ಧವಾದ ಮನಸ್ಸನ್ನು ಉಳ್ಳವರು. ಮಾನವರಾದ ನಾವು ಎಲ್ಲರೂ ಸಹ ಒಂದೇ ಎಂಬ ಭಾವನೆಯನ್ನು ಹೊಂದಿರುವುದಿಲ್ಲ. ದೇವಸ್ಥಾನದ ಮುಕ್ತ ಪ್ರವೇಶ, ಸಹಪಂಕ್ತಿ ಭೋಜನಕ್ಕೆ ಎಲ್ಲರಿಗೂ ಸಹ ಅವಕಾಶ ಕೊಟ್ಟಿದ್ದರೂ ಅಸಮಾನತೆಯನ್ನು ಸಮಾಜದಲ್ಲಿ ಕಾಣುತ್ತೇವೆ. ಸಮಾಜವು ಸಹ ಎಲ್ಲಾ ಸಮಸ್ಯೆಗಳನ್ನು ಮೀರಿ ಅಧುನಿಕತೆಯತ್ತ ಬೆಳೆಯುತ್ತಾ ಹೋದಂತೆ ಜಾತಿ ಸಮಸ್ಯೆಯು ಸಡಿಲವಾಗುತ್ತಾ ಹೋಗುವುದನ್ನು ಕಾಣಬಹುದಾಗಿದೆ. ಜಾತಿಯನ್ನು ಪ್ರಶ್ನೆ ಮಾಡುವವರು ಸಹ ಸಮಾಜದಲ್ಲಿ ಅಲ್ಪ ಪ್ರಮಾಣದಲ್ಲಿ ಕಂಡುಬರುತ್ತಿದ್ದರೂ ಸಹ ಜಾತಿಯ ಬಗ್ಗೆ ಸಂದರ್ಭಕ್ಕೆ ತಕ್ಕಂತೆ ಸಮಾಜದಲ್ಲಿ ಬಳಸುವುದನ್ನು ಕಾಣುತ್ತೇವೆ. ಹಾಗೆಯೇ ಮುಂದಿನ ದಿನಗಳಲ್ಲಿ ಜಾತಿ ಎಂಬ ಪದವು ಜನರ ಹತ್ತಿರ ಸುಳಿಯುತ್ತಿದ್ದರೂ ಜಾತಿ ಎನ್ನುವ ಭಾವನೆಯನ್ನು ಸಮಾಜದಿಂದ ಕಿತ್ತು ಹಾಕಲು ಸಾಧ್ಯವಿಲ್ಲ. ಸಮಾಜವು ಸಹ ಅಭಿವೃದ್ಧಿಯತ್ತ ಮುಂದುವರಿಯುತ್ತಿದ್ದರೂ, ಸಮಾಜದಲ್ಲಿ ಜನರುಗಳು ವಿಶ್ವಮಾನವರಾಗಿ ಬಾಳುವ ಆಸೆಯನ್ನು ಹೊಂದಿದ್ದರೂ, ಅಲ್ಪ ಮಾನವರಾಗುತ್ತಾರೆ. ಘರ್ಷಣೆಗಳು, ಸಮಸ್ಯೆಗಳು ಸಹ ಸಮಾಜದಲ್ಲಿ ಉದ್ಭವಿಸಿದ್ದರೂ, ನಾವೆಲ್ಲರೂ ಅಸಮಾನತೆಯನ್ನು ಹೊಂದಿರುವ ಮಾನವರು ಎಂಬ ನನ್ನ ಭಾವನೆ.

ಸಮಾಜದಲ್ಲಿ ಸ್ತ್ರೀಯರಿಗೆ ಸಮಾನವಾದ ಸ್ಥಾನಮಾನಗಳು ಸಿಗುತ್ತಿದ್ದರೂ ಸಹ ಪುರುಷರು ಹೀನಾಯವಾದ ದೃಷ್ಟಿಯಿಂದ ನೋಡುತ್ತಿದ್ದನ್ನು ಕಾಣಬಹುದಾಗಿದೆ. ಆದರೂ ಅವರು ತಮ್ಮ ಕೆಲಸ ಕಾರ್ಯಗಳನ್ನು ಶ್ರದ್ಧಾಪೂರ್ವಕವಾಗಿ ಮಾಡುವುದನ್ನು ಕಾಣಬಹುದು. ಆದರೆ ಸತ್ಯಭಾಮಳಂತಹ ಸ್ತ್ರೀಯರು ಸಹ ಕಾಣಸಿಗುವುದು ಅಪರೂಪವೇ. ಆದರೂ ಯಾರಿಗೂ ಹೆದರದೆ ತನ್ನ ಬದುಕನ್ನು ರೂಪಿಸಿಕೊಳ್ಳುವುದನ್ನು ಕಾಣಬಹುದು. ಎಲ್ಲಾ ಜನರನ್ನು ಸಹ ಸಮಾನವಾದ ರೀತಿಯಲ್ಲಿ ಕಾಣುವುದನ್ನು ದಾಟು ಕಾದಂಬರಿಯಲ್ಲಿ ಕಾಣಬಹುದಾಗಿದೆ. ಸಮಾಜದಲ್ಲಿರುವ ಜನರುಗಳ ಮಾತನ್ನು ಕೇಳದೆ ತನ್ನದೆ ಆದ ನಿಲುವಿನಲ್ಲಿ ನಡೆಯುತ್ತಾಳೆ ಏನೇ ಕಷ್ಟಗಳು ಬಂದರೂ ಸಹ ಧೈರ್ಯದಿಂದ ಎದುರಿಸುವುದನ್ನು

ನಾವು ಕಾಣಬಹುದು. ಸಭ್ಯ ವ್ಯಕ್ತಿಯಾಗಿ ಸಹನಾ ಮೂರ್ತಿಯಾಗಿ ಕಂಡುಬರುವಂತಹ ಏಕೈಕ ಮಹಿಳೆಯಾಗಿ ಕಾದಂಬರಿಯಲ್ಲಿ ಬರುವುದನ್ನು ಕಾಣಬಹುದು.

ಕಾದಂಬರಿಯಲ್ಲಿ ಬರುವಂತಹ ರಾಜಕಾರಣಿಗಳಂತೆ ಇಂದಿನ ರಾಜಕಾರಣಿಗಳು ಸಹ ಕಂಡು ಬರುತ್ತಾರೆ. ರೈತರಿಗೆ ಚುನಾವಣೆಯಲ್ಲಿ ಗೆಲ್ಲಿಸಿದಾಗ ನಾವು ಯಾವಾಗಲೂ ನಿಮ್ಮ ಸೇವೆಯನ್ನು ಮಾಡಲು ಸದಾ ಸಿದ್ದ ಎಂಬ ಭರವಸೆಯನ್ನು ಕೊಡುತ್ತಾರೆ. ಆದರೆ ಗೆದ್ದ ಮೇಲೆ ಸಮಾಜದ ಅಭಿವೃದ್ದಿಗಳಿಗೆ ಆಧ್ಯತೆಯನ್ನು ಕೊಡುವುದಿಲ್ಲ. ಅವುಗಳು ಸಹ ಮಂದಗತಿಯಲ್ಲಿ ಸಾಗುವುದನ್ನು ಕಾಣುತ್ತೇವೆ. ಭರವಸೆಗಳು ಮಾತ್ರ ಹಾಗೆಯೇ ಉಳಿಯುವುದನ್ನು ಕಾಣಬಹುದು. ಅವರುಗಳು ಮಾತ್ರ ಉನ್ನತ ಸ್ಥಾನಕ್ಕೆ ಹೋಗುವುದಕ್ಕೆ ಬಯಸುವುದನ್ನು ಕಾಣಬಹುದು. ಸಮಾಜದ ಜನರುಗಳೊಂದಿಗೆ ಬದುಕುತ್ತಾ ಅವರ ಕಣ್ಣುಗಳನ್ನು ಒರೆಸುವ ಕೆಲಸಗಳನ್ನು ಮಾತ್ರ ರಾಜಕಾರಣಿಗಳು ಮಾಡುವುದನ್ನು ಕಾಣಬಹುದು. ಆದರೆ ಪ್ರತಿಯೊಬ್ಬ ಮನುಷ್ಯನಿಗೂ ರಾಜಕೀಯದ ಅರಿವು ಅವಶ್ಯಕವಾಗಿ ಬೇಕಾಗುತ್ತದೆ.

ಗಂಡು ಹೆಣ್ಣಿನ ಸಂಬಂಧಗಳು ಪರಸ್ಪರ ಅನ್ಯೋನ್ಯವಾದ ಸಂಬಂಧವನ್ನು ಹೊಂದಿರುತ್ತದೆ. ಇಲ್ಲದೆ ಹೋದರೆ ಸಮಾಜದಲ್ಲಿ ಬದುಕುವುದು ಕಷ್ಟವಾಗುತ್ತದೆ. ಆದರೆ ಅಂತರ್ಜಾತಿಯ ಗಂಡು ಹೆಣ್ಣುಗಳು ಮದುವೆಯನ್ನು ಮಾಡಿಕೊಂಡು ಸುಖವಾಗಿ ಬಾಳುವುದಕ್ಕೆ ಪ್ರಾರಂಭಿಸುತ್ತಾರೆ. ಆದರೂ ಕೊನೆಯಲ್ಲಿ ಸಮಾಜದಲ್ಲಿ ಸಮಾನತೆ, ಮರ್ಯಾದೆ ಸಿಗುವುದಿಲ್ಲ. ಬಂಧು ಬಳಗದವರಿಂದಲೂ ವಿರೋಧವನ್ನು ಕಟ್ಟಿಕೊಳ್ಳುತ್ತಾರೆ. ಅವರು ನೆಮ್ಮದಿಯಿಂದ ಬದುಕುವುದಕ್ಕೆ ಆಗುವುದಿಲ್ಲ. ಒಂದಲ್ಲ ಒಂದು ದಿವಸ ದುರಂತವನ್ನು ಅನುಭವಿಸಬೇಕಾಗುತ್ತದೆ. ಇದಕ್ಕೆ ದಾಟು ಕಾದಂಬರಿಯಲ್ಲಿ ಬರುವ ಗಂಡು ಹೆಣ್ಣುಗಳ ಪಾತ್ರಗಳಲ್ಲಿ ಕಾಣಬಹುದು.

ಅಲ್ಪ ಓದಿದ್ದರೂ ಆದರೂ ವ್ಯವಹಾರ ಕೌಶಲ್ಯ, ಸೂಕ್ಮಬುದ್ಧಿ ಮತ್ತು ಮನಸ್ಸಿನ ಮೇಲಿನ ಹಿಡಿತವನ್ನು ನಿರೂಪಿಸುತ್ತದೆ. ಆದರೂ ಸಹ ಜಾಣ್ಮೆಯಿಂದ ಬುದ್ಧಿಶಕ್ತಿಯಿಂದ ಸಮಾಜದಲ್ಲಿ ಒಳ್ಳೆಯ ಜೀವನವನ್ನು ಮಾಡುವುದನ್ನು ಕಾಣಬಹುದು. ಸಮಾಜದಲ್ಲಿ ಒಳ್ಳೆಯ ಹೆಸರನ್ನು ಮಾಡಿಕೊಂಡು ಎಲ್ಲರನ್ನು ನಂಬಿಸುವಂತಹ ವ್ಯಕ್ತಿತ್ವವು ಕೆಲವರಿಗೆ ಮಾತ್ರ ಇರುತ್ತದೆ. ಸಮಾಜದಲ್ಲಿ ಯಾರ ವಿರೋಧವನ್ನು ಕಟ್ಟಿಕೊಳ್ಳದೆ ತಾನು ಮಾತ್ರ ಹಣವನ್ನು ಸಂಪಾದನೆ ಮಾಡುತ್ತಾನೆ. ಹಣವನ್ನು ಕೂಡಿಟ್ಟು ಇಡುವನೆ ಹೊರತು ಪೋಲನ್ನು ಮಾಡುವುದಿಲ್ಲ. ಹಣವನ್ನು ವೆಚ್ಚಮಾಡಿದರೂ ಸಹ ಅದರಲ್ಲಿ ಲಾಭ ಬರುವಂತಿರಬೇಕು. ಅಂತಹ ಕೆಲಸಗಳನ್ನು ಮಾತ್ರ ಮಾಡುತ್ತಾನೆ. ಇದಕ್ಕೆ ಕಾದಂಬರಿಯ ವೆಂಕಟೇಶನ ಪಾತ್ರವನ್ನು ತೆಗೆದುಕೊಳ್ಳಲಾಗುತ್ತದೆ. ದಾಟು ಕಾದಂಬರಿಯಲ್ಲಿ ಬರುವ ಪಾತ್ರಗಳನ್ನು ಭೈರಪ್ಪನವರು

ಸಮಾಜದಲ್ಲಿ ಜನರುಗಳಿಗೆ ಭಿನ್ನವಾದ ಸ್ಥರಗಳಲ್ಲಿ ಹೊಂದಿಕೊಳ್ಳುವಂತೆ ಚಿತ್ರಿಸುತ್ತಿರುವುದನ್ನು ಕಾಣಬಹುದಾಗಿದೆ.

ಒಟ್ಟಿನಲ್ಲಿ 'ದಾಟು'ಎಂದರೆ, ಚಲನೆಗೆ ಅಡ್ಡಿಯಾದ ನದಿಯನ್ನೋ, ಕಾಲುವೆಯನ್ನೋ, ಬೇಲಿಯನ್ನೋ, ನಿರ್ಬಂಧವನ್ನೋ, ಮೀರಿ ಹೋಗುವ ಕ್ರಿಯೆಯಾಗಬಹುದು. ಆದರೆ, ಬೈರಪ್ಪನವರ ಕೃತಿಯ ಜಾತಿ ಮತಗಳ ನಿರ್ಬಂಧಗಳನ್ನು ದಾಟುವ ಪ್ರಯತ್ನ ಮತ್ತು ಅದರ ವೈಫಲ್ಯವನ್ನು ಚಿತ್ರಿಸಿರುವುದನ್ನು ಕಾಣಬಹುದಾಗಿದೆ.

***

## ಅನುಬಂಧ ೧

# ಗ್ರಂಥಋಣ


೧) ಮೂಲ ಗ್ರಂಥಗಳು

| | | | |
|---|---|---|---|
| ೧) | ದಾಟು | ೧೯೭೩ | ಎಸ್.ಎಲ್.ಭೈರಪ್ಪ<br>ಸಾಹಿತ್ಯ ಭಂಡಾರದ ಪ್ರಕಾಶನ<br>ಬೆಂಗಳೂರು. |
| ೨) | ಕನ್ನಡ ಭಾರತಿ | ೧೯೮೪ | ಸಂಪಾದಕ<br>ಎಲ್.ಎಸ್.ಶೇಷಗಿರಿರಾವ್<br>ಕನ್ನಡ ಸಾಹಿತ್ಯ ಅಕಾಡೆಮಿ<br>ಬೆಂಗಳೂರು. |
| ೩) | ಕೃತಿ ಸಂಸ್ಕೃತಿ | ೧೯೯೪ | ಎಂ.ಜಿ.ಕೃಷ್ಣಮೂರ್ತಿ<br>ಋಜುವಾತು ಪ್ರಕಾಶನ<br>ಮೈಸೂರು. |
| ೪) | ಡಾ.ಎಸ್.ಭೈರಪ್ಪ | ೧೯೯೫ | ಡಾ.ವಿಠ್ಠಲರಾವ್ ಗಾಯಕ್ವಾಡ್<br>ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ<br>ಹಂಪಿ, ವಿದ್ಯಾರಣ್ಯ |
| ೫) | ಸಾಹಿತ್ಯ ಸ್ಪಂದನ | ೨೦೦೧ | ಉದ್ಯಾವರ ಮಾಧವ ಆಚಾರ್ಯ<br>ಕರ್ನಾಟಕ ಸಂಘ,<br>ಪುತ್ತೂರು. |
| ೬) | ಎಸ್.ಎಲ್.ಭೈರಪ್ಪ ಅವರ ಕೃತಿಗಳ ವಿಮರ್ಶೆ | ೨೦೦೨ | ಸಂಪಾದಕರು,<br>ಡಾ.ಸುಮತೀಂದ್ರ ನಾಡಿಗ<br>ಸುಂದರ ಪ್ರಕಾಶನ<br>ಬೆಂಗಳೂರು. |
| ೭) | ದಲಿತ ಮಾರ್ಗ | ೨೦೦೨ | ಅರವಿಂದ ಮಾಲಗತ್ತಿ<br>ಕನ್ನಡ ಪುಸ್ತಕ ಪ್ರಾಧಿಕಾರ<br>ಬೆಂಗಳೂರು. |

| | | |
|---|---|---|
| ೮) ಸಾಹಿತ್ಯ ಪರಿಸರ | ೨೦೦೫ | ಪ್ರೋ.ಶಿವರಾಮಯ್ಯ<br>ಅಜಂತ ಎಂಟರ್‌ಪ್ರೈಸಸ್<br>ಬೆಂಗಳೂರು. |
| ೯) ಭೈರಪ್ಪಾಭಿನಂದನಾ | ೨೦೦೫ | ಸಂಪಾದಕ, ಕೊಂಡಜ್ಜಿ ವೆಂಕಟೇಶ<br>ಕೊಂಡಜ್ಜಿ ಮುದ್ರಣ ಮತ್ತು ಪ್ರಕಾಶನ<br>ಬೆಂಗಳೂರು. |
| ೧೦) ಭೈರಪ್ಪನವರ ಕಾದಂಬರಿಗಳಲ್ಲಿ ಸ್ತ್ರೀ ಪಾತ್ರಗಳು | ೨೦೦೬ | ಡಾ.ಆರ್.ಎನ್.ದಿಂಡೂರ<br>ಪ್ರಮೀಳಾ ಪ್ರಕಾಶನ<br>ಬಿಜಾಪುರ. |
| ೧೧) ನಿಮ್ಮೊಡನೆ ವಿಮರ್ಶಾ ಲೇಖನಗಳು | ೨೦೦೬ | ಡಾ.ಮಹಾದೇವ ಕಣವಿ<br>ವಿದ್ಯಾನಿಧಿ ಪ್ರಕಾಶನ, ಗದಗ. |
| ೧೨) ಕಾವ್ಯ ಮತ್ತು ವಿಮರ್ಶೆಯ ದಾರಿ | ೨೦೦೮ | ಡಾ.ಸುಮತೀಂದ್ರ ನಾಡೀಗ<br>ಸಪ್ನ ಬುಕ್ ಹೌಸ್<br>ಬೆಂಗಳೂರು. |
| ೧೩) ಯುಗಸಾಕ್ಷಿ ಭೈರಪ್ಪರ ಕೃತಿಗಳ ಅವಲೋಕನ | ೨೦೦೯ | ಎಲ್.ವಿ.ಶಾಂತಕುಮಾರಿ<br>ಸಾಹತ್ಯ ಭಂಡಾರದ ಪ್ರಕಾಶನ<br>ಬೆಂಗಳೂರು. |
| ೧೪) ಭೈರಪ್ಪನವರ ಮಹಾನ್ ಕೃತಿಗಳು | ೨೦೦೯ | ಸಂಪಾದಕ, ಗೌರಿಸುಂದರ<br>ಸುಂದರ ಪ್ರಕಾಶನ<br>ಬೆಂಗಳೂರು. |
| ೧೫) ಭೈರಪ್ಪನವರ ಕಾದಂಬರಿಗಳೊಡನೆ ಧರ್ಮ, ಕರ್ಮ, ಜಿಜ್ಞಾಸೆ | ೨೦೧೧ | ಡಾ.ಕೆ.ಎಲ್.ಗೋಪಾಲ ಕೃಷ್ಣಯ್ಯ<br>ನವಕರ್ನಾಟಕ ಪಬ್ಲಿಕೇಷನ್ಸ<br>ಬೆಂಗಳೂರು. |

**ಅನುಬಂಧ ೨**

**೨. ಪರಾಮರ್ಶನ ಗ್ರಂಥಗಳು**

| | | |
|---|---|---|
| ೧) ಯುಗಧರ್ಮ ಹಾಗೂ ಸಾಹಿತ್ಯ ದರ್ಶನ | ೧೯೬೨ | ಡಾ.ಕೀರ್ತಿನಾಥ ಕುರ್ತಕೋಟಿ<br>ಮನೋಹರ ಗ್ರಂಥಮಾಲೆ<br>ಧಾರವಾಡ |
| ೨) ಭೈರಪ್ಪನವರ ಕಾದಂಬರಿಗಳು | ೧೯೭೭ | ಲೀಲಾವತಿ ತೋರಣಗಟ್ಟಿ<br>ವಿದ್ಯಾನಿಧಿ ಪ್ರಕಾಶನ<br>ಗದಗ |
| ೩) ಸಹಸ್ಪಂದನ | ೧೯೭೮ | ಸಂಪಾದಕರು, ಮಾಧವ ಕುಲಕರ್ಣಿ<br>/ ಮ.ಗೋವಿಂದರಾವ್<br>ಸಾಹಿತ್ಯ ಭಂಡಾರದ ಪ್ರಕಾಶನ<br>ಬೆಂಗಳೂರು |
| ೪) ಕನ್ನಡ ಕಥನ ಸಾಹಿತ್ಯ ಮತ್ತು ಕಾದಂಬರಿ | ೨೦೦೩ | ಡಾ.ಜಿ.ಎಸ್.ಆಮೂರ<br>ಪ್ರಿಯದರ್ಶಿನಿ ಪ್ರಕಾಶನ<br>ಬೆಂಗಳೂರು |

**ಅನುಬಂಧ ೩**

ದಾಟು ಕಾದಂಬರಿಯು ಭಾರತದ ಎಲ್ಲಾ ಭಾಷೆಗಳಿಗೂ, ಅದರಲ್ಲೂ ಮುಖ್ಯವಾಗಿ ಇಂಗ್ಲೀಷಿಗೂ ಅನುವಾದವಾಗಿದೆ. ೧೯೭೫ರಲ್ಲಿ ಎಸ್.ಎಲ್. ಭೈರಪ್ಪನವರ 'ದಾಟು' ಕಾದಂಬರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯನ್ನು ಪಡೆದುಕೊಂಡಿತು.

***

